ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೫೩ ಜುಲೈ ೨೦೧೭ ಸಂಚಿಕೆ : ೦೭



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಗೋಕರ್ಣ ಮಹಾಬಲೇಶ್ವರ ಕ್ಷೇತ್ರದಿಂದ ಕೊಡಮಾಡುವ 'ಸಾರ್ವಭೌಮ" ಪ್ರಶಸ್ತಿಯನ್ನು ಜೂನ್ ೭ ರಂದು ಶ್ರೀಮಠದಲ್ಲಿ ಪ್ರದಾನ ಮಾಡಲಾಯಿತು. ಈ ಸಂದರ್ಭದಲ್ಲಿ ರಾಮಚಂದ್ರಾಪುರದ ಶ್ರೀಗಳು ಸೇರಿದಂತೆ ಹರಗುರು–ಚರಮೂರ್ತಿಗಳು ಉಪಸ್ಥಿತರಿದ್ದರು.



ಜೈನ ಧರ್ಮಗುರುಗಳಾದ ಆಚಾರ್ಯ ಶ್ರೀ ಪುಷ್ಪದಂತ ಮಹಾರಾಜ್ ಅವರು ಶ್ರೀಮಠಕ್ಕೆ ಆಗಮಿಸಿ ಪರಮಪೂಜ್ಯ ಶ್ರೀ ಶ್ರೀಗಳವರ ಆರೋಗ್ಯ ವಿಚಾರಿಸಿದರು. ಈ ಸಂದರ್ಭದಲ್ಲಿ ಇತರೆ ಜೈನ ಮುನಿಗಳು ಉಪಸ್ಥಿತರಿದ್ದರು.



ನೂರು ಹತ್ತರ ವಯಸ್ಸಿನಲ್ಲಿಯೂ ಪರಮಪೂಜ್ಯ ಶ್ರೀ ಶ್ರೀಗಳವರು ಶ್ರೀಕ್ಷೇತ್ರದ ಆರಾಧ್ಯದೈವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ದರ್ಶನ ಮಾಡಿ ಬೆಟ್ಟದ ಮೆಟ್ಟಿಲುಗಳಿಂದ ಇಳಿದು ಬರುತ್ತಿರುವ ಅಪರೂಪದ ವಿಸ್ಮಯ ದೃಶ್ಯ.



ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ಕೆ.ಬಿ. ಶಿವಶಂಕರಯ್ಯ
ಸಿ. ಕುಮಾರಸ್ವಾಮಿ

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ
ಶ್ರೀ ಸಿದ್ಧಗಂಗಾ ಮಠ,
ತುಮಕೂರು-572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ




ಸಂಪುಟ : ೫೩ ಜುಲೈ ೨೦೧೭ ಸಂಚಿಕೆ : ೦೭

## ಒಳಪುಟಗಳಲ್ಲಿ ..................



ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00

# ಪರಮಪೂಜ್ಯ ಶ್ರೀ ಶ್ರೀಗಳವರಿಗೆ 'ಸಾರ್ವಭೌಮ' ಪ್ರಶಸ್ತಿ

'ಹರಿವನದಿಗೆ ಮೈಯೆಲ್ಲಾ ಕಾಲು, ಉರಿವಗ್ನಿಗೆ ಮೈಯೆಲ್ಲಾ ನಾಲಗೆ, ಬೀಸುವ ಗಾಳಿಗೆ ಮೈಯೆಲ್ಲಾ ಕಣ್ಣು' ಎಂಬಂತೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಜೀವನ ಶೈಲಿಗೆ, ಸೇವೆಗೆ ಭಾಷ್ಯರೂಪಿಗಳು. ಕಾಯಕದ ಕಣ್ಣು, ದಾಸೋಹದ ಉಸಿರು, ಮಾನವೀಯತೆಯ ಮಂಗಳರೂಪ. ಶ್ರೀಗಳವರನ್ನು ಪ್ರಶಸ್ತಿಗಳನ್ನಿತ್ತು ಗೌರವಿಸುತ್ತವೆ ಅನೇಕ ಸಂಘ ಸಂಸ್ಥೆಗಳು, ಮಠಮಂದಿರಗಳು, ಪುಣ್ಯಧಾಮಗಳು. ಮೊನ್ನೆ ದಿನಾಂಕ ೭-೬-೨೦೧೭ರಂದು ಶ್ರೀಮಠದಲ್ಲಿ ಧೋ ಧೋ ಎಂದು ಧಾರಾಕಾರವಾಗಿ ಸುರಿಯುತ್ತಿರುವ ಮಳೆಯಲ್ಲಿಯೇ ಹಳೆಮಠದ ಒಳಾಂಗಣದಲ್ಲಿ ಕಾಲಿಡಲು ಜಾಗವಿಲ್ಲದಂತೆ ಭಕ್ತಸಮೂಹ ನೆರೆದಿತ್ತು. ಕಾರಣವೇನೆಂದರೆ ಗೋಕರ್ಣ ಪುಣ್ಯಕ್ಷೇತ್ರದ ಮಹಾಬಲೇಶ್ವರ ರಾಮಚಂದ್ರಾಪುರ ಮಠದ ವತಿಯಿಂದ ನೀಡುವ **'ಸಾರ್ವಭೌಮ'** ಪ್ರಶಸ್ತಿಯನ್ನು ಪೂಜ್ಯರಿಗೆ ಅರ್ಪಿಗೆ ಧನ್ಯತೆಯನ್ನನುಭವಿಸಿತು. ರಾಮಚಂದ್ರಾಪುರದ ಶ್ರೀಗಳು ಮಾತನಾಡುತ್ತಾ ಸಿದ್ಧಗಂಗಾ ಶ್ರೀಗಳವರು ಗುರುಸಾರ್ವಭೌಮರು, ಕಾಯಕ ಸಾರ್ವಭೌಮರು, ದಾಸೋಹ ಸಾರ್ವಭೌಮರು, ಮಠಾಧಿಪತಿಗಳಿಗೆಲ್ಲ ಮಾದರಿಯಾಗಿರುವುದು ಸಮಾಜದ ಮಹಾಪುಣ್ಯವೆಂದು ಮೆಚ್ಚುಗೆಯ ನುಡಿಗಳನ್ನರ್ಪಿಸಿದರು.

ಶ್ರೀಕ್ಷೇತ್ರದಿಂದ ಬಂದಿದ್ದ ಭಕ್ತಾದಿಗಳೆಲ್ಲ ಪಂಚೆ, ವಲ್ಲಿ, ವಸ್ತ್ರಧಾರಿಗಳಾಗಿ ಎಲ್ಲರ ಗಮನ ಸೆಳೆದರು. ಮಳೆಯ ಮಧ್ಯದಲ್ಲಿ ನಡೆದ ಸಮಾರಂಭ ಪೂಜ್ಯ ಶ್ರೀಗಳವರ ಸೇವೆಯಲ್ಲಿ ತಾನೂ ಧನ್ಯವಾಗುತ್ತಿದ್ದೇನೆ ಎಂಬಂತಿತ್ತು. ಬಂದಿದ್ದ ಸಾವಿರಾರು ಭಕ್ತಾದಿಗಳಿಗೆ ದಾಸೋಹ ಕೈಂಕರ್ಯ ಏರ್ಪಡಿಸಲಾಗಿತ್ತು. **'ಸಾರ್ವಭೌಮ'** ಪ್ರಶಸ್ತಿಯ ಸಮಾರಂಭದಲ್ಲಿ ಭಾಗವಹಿಸಿದ ಎಲ್ಲರಿಗೂ **'ಸಿದ್ಧಗಂಗಾ'** ತುಂಬು ಹೃದಯದ ಅಭಿನಂದನೆಗಳನ್ನು ಸಲ್ಲಿಸುತ್ತದೆ.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು







# ಪ್ರಜಾಪ್ರಭುತ್ವದಲ್ಲಿ ಪತ್ರಿಕೆಗಳ ಪಾತ್ರ

ಪ್ರಜಾಪ್ರಭುತ್ವದಲ್ಲಿ ಪತ್ರಿಕೆಗಳ ಸೇವೆ ತುಂಬಾ ಮಹತ್ವಪೂರ್ಣವಾದುದು. ಆಡಳಿತವನ್ನು ಸದಾ ಕ್ರಿಯಾಶೀಲವಾಗಿರುವಂತೆ, ತತ್ತ್ವನಿಷ್ಠವಾಗಿರುವಂತೆ, ಜನಪರ ಕಲ್ಯಾಣದಲ್ಲಿ ನಿರತವಾಗಿರುವಂತೆ, ನೋಡಿಕೊಳ್ಳುವ ಪತ್ರಿಕೋದ್ಯಮ ಅನಭಿಷಿಕ್ತ ಶಾಸನ ಕ್ಷೇತ್ರ. ಜನವಾಣಿಯನ್ನು ಆಡಳಿತಾಂಗಕ್ಕೆ ಮುಟ್ಟಿಸುವ ವಿನೂತನ ವಿಶಿಷ್ಟ ಸೇವೆ ಪತ್ರಿಕೋದ್ಯಮದ್ದು. ಸಮಕಾಲೀನ ವಿಶ್ವದ ತಾತ್ಕಾಲಿಕ ಇತಿಹಾಸವನ್ನು ಬರೆಯುತ್ತಲೇ ಸಾರ್ವಜನಿಕ ಜೀವನದ ಸ್ಥಿತಿಗತಿಗಳನ್ನು ತಿದ್ದುವ, ಸುಧಾರಣಾ ಕಾರ್ಯ ಮಾಡುವ ಪತ್ರಿಕೆಗಳೆಂದರೆ ಅದರ ಘನತೆ ಗಾಂಭೀರ್ಯಗಳಿಗಾಗಿ, ವಸ್ತುನಿಷ್ಠ ದೃಷ್ಟಿ ವೈಶಿಷ್ಟ್ಯಗಳಿಗಾಗಿ ಸಮರ್ಪಣಾ ಭಾವದಿಂದ ದುಡಿಯುವ ಜಾಗೃತ ಮನಸ್ಸುಗಳೆನ್ನ ಬೇಕಾಗುತ್ತದೆ. ಅಂತಹ ಉದಾತ್ತ ಮನದ ಪತ್ರಿಕಾ ಸೇವಾ ಬಂಧುಗಳನ್ನು ಪ್ರಶಸ್ತಿಯನ್ನಿತ್ತು ಪುರಸ್ಕರಿಸುವುದೆಂದರೆ ರಾಷ್ಟ್ರಸೇವೆಯೆಂದೇ ಭಾವಿಸಬೇಕಾಗುತ್ತದೆ.

ಸಮಾಜಕ್ಕಾಗಿ, ಜನತೆಗಾಗಿ, ದೇಶಕ್ಕಾಗಿ ದುಡಿದವರನ್ನು ಗೌರವಿಸುವುದು ಸಂಸ್ಕೃತಿಯೆನಿಸುತ್ತದೆ. ನಾಗರಿಕ ಜೀವನ ಶೈಲಿ ಎನಿಸುತ್ತದೆ, ಮಾನವೀಯತೆಯ ಸುಗಂಧವೆನಿಸುತ್ತದೆ.

ಪತ್ರಿಕೆಗಳು ಭಾಷೆಯನ್ನು ಬೆಳೆಸುವ, ರೂಪಿಸುವ ಸಾಧನ ವಿಶೇಷಗಳು. ಜನಮನವನ್ನು ಎಚ್ಚರವಾಗಿಡುವ ಸಾಧನಗಳು. ಭಾಷಾ ಕೋಶಗಳನ್ನು ಶ್ರೀಮಂತಗೊಳಿಸುವಂಥವುಗಳು.

ಒಟ್ಟಿನಲ್ಲಿ ಪತ್ರಿಕೆಗಳು ವರ್ತಮಾನದ ಅಕ್ಷರ ದರ್ಪಣಗಳು. 'ಕರಿಯು ಕನ್ನಡಿಯೊಳಡಗಿದಂತೆ' ಸೇವಾಪಥಗಾಮಿಗಳು.

* * *

## ಶ್ರೀ ಸಿದ್ಧಲಿಂಗೇಶ್ವರ ವಚನ



*ತನು ನಿನಗನ್ಯವೆಂದರಿಯದೆ, ತನು ನಿನ್ನದೆಂಬೆ*
*ಮನನಿನಗನ್ಯವೆಂದರಿಯದೆ, ಮನನಿನ್ನದೆಂಬೆ*
*ಧನ ನಿನಗನ್ಯವೆಂದರಿಯದೆ, ಧನನಿನ್ನದೆಂಬೆ*
*ಸ್ಥೂಲ ಸೂಕ್ಷ್ಮ ಕಾರಣವೆಂದೆಂಬ ತನುತ್ರಯ ನೀನಲ್ಲ*
*ಮನಮನನೀಯವೆಂಬ ಮನತ್ರಯ ನೀನಲ್ಲ*
*ಧನ ಮಮಕಾರ ಸಂಗ್ರಹವೆಂಬ ಮಲತ್ರಯ ನೀನಲ್ಲ*
*ಇವು ಒಂದೂ ನೀನಲ್ಲ*
*ನೀನಾರೆಂದದೆ*
*ನೀನು ಸಚ್ಚಿದಾನಂದ ಸ್ವರೂಪವಪ್ಪ ಶಿವತತ್ವವೇ ನೀನೆಂದು ತಿಳಿದು ನೋಡಾ*
*ಉಳಿದವೆಲ್ಲಾ ಹುಸಿಯೆಂದೆ ನಾ*
*ಮಹಾಲಿಂಗುರು ಶಿವಸಿದ್ಧೇಶ್ವರ ಪ್ರಭುವೇ*

ತನು ನಿನಗನ್ಯವೆಂದರಿಯದೆ – ತನು ನಿನಗೆ ತರವೆಂದು ತಿಳಿಯದೆ, ತನು – ನಿನ್ನದೆಂಬೆ – ತನುವು ನಾನು ನನ್ನದೆಂದು ಹೇಳುವೆ, ಮನ ನಿನಗನ್ಯವೆಂದರಿಯದೆ – ಮನ ನಿನಗೆ ತರವೆಂದು ತಿಳಿಯದೆ, ಮನ ನಿನ್ನದೆಂಬೆ, ಮನವು ನಾನು ನನ್ನದೆಂದು ಹೇಳುವೆ, ಧನ ನಿನಗನ್ಯವೆಂದರಿಯದೆ – ದ್ರವ್ಯವು ನಿನಗೆತರವೆಂದು ತಿಳಿಯದೆ, ಧನ ನಿನ್ನದೆಂಬೆ – ಧನವು ನಾನು ನನ್ನದೆಂದು ಹೇಳುವೆ, ಸ್ಥೂಲ ಸೂಕ್ಷ್ಮ ಕಾರಣವೆಂಬ – ಸ್ಥೂಲ ಸೂಕ್ಷ್ಮ ಕಾರಣವೆಂದು ಹೇಳಿಸಿಕೊಂಬ ತನುತ್ರಯ ನೀನಲ್ಲ, ತನುತ್ರಯ – ಮೂರು ತನುಗಳು, ನೀನಲ್ಲ ಆತ್ಮನಲ್ಲವು, ಮನ ಮನನ ಮನನೀಯವೆಂಬ – ಮನ ಮನನ ಮಾನನೀಯವೆಂದು ಹೇಳಿಸಿಕೊಂಬ, ಮನತ್ರಯ – ಮೂರು ಮನಗಳು, ನೀನಲ್ಲ – ಆತ್ಮನಲ್ಲವು, ಧನ ಮಮಕಾರ ಸಂಗ್ರಹವೆಂಬ, ಧನ – ದ್ರವ್ಯವು, ಮಮಕಾರ – ಪುತ್ರರುಗಳು, ಸಂಗ್ರಹವೆಂಬ – ಸ್ತ್ರೀಯಳೆಂಬ, ಕಾರ್ಮಿಕ ತ್ರಯ ಮಲ ಮೂರು, ನೀನಲ್ಲ – ಆತ್ಮನಲ್ಲವು, ಇವು ಒಂದು ನೀನಲ್ಲ – ಹಿಂದೆ ಹೇಳಿದಂಥ ಮಲ ಮೂರು ಪ್ರಕಾರವಾದಂಥವು, ನೀನಲ್ಲ – ಆತ್ಮನಲ್ಲವು, ನೀನಾರೆಂದರೆ – ನೀನಾರೆಂದು ಕೇಳಿದಡೆ, ನೀನು ಸಚ್ಚಿದಾನಂದವಪ್ಪ, ಸತ್–ಉಂಟಾದ, ಚಿತ್ತು – ಜ್ಞಾನಮಯವಾದ, ಆನಂದವಪ್ಪ ಸಂತೋಷಸ್ವರೂಪವಾದ, ಶಿವತತ್ವವೇ – ಮಹಾಲಿಂಗ ತತ್ವವೆ, ನೀನೆಂದು – ಪರಶಿವಲಿಂಗವೆಂದು, ತಿಳಿದು – ಅರಿದು, ನೋಡಾ–ಕಂಡಾ, ಉಳಿದವೆಲ್ಲಾ – ಮಿಕ್ಕಿನವೆಲ್ಲಾ, ಹುಸಿಯೆಂದೆನಾ – ಅಸ್ಯತವೆಂದೆನು ಮಹಾಲಿಂಗುರು ಶಿವಸಿದ್ಧೇಶ್ವರ ಪ್ರಭುವೇ.

*(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ|| ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು– ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)*

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕುರುಡರಿಗೆ ಕಣ್ಣಾದೆ ಕುಂಟರಿಗೆ ಕಾಲಾದೆ
ಮೂಗರಿಗೆ ಬಾಯಾಗಿ ಮೂಡಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಧ್ಯಯನ ತಪಸಿಯ ಅನುಪಮ ಚರಿತನೆ
ಅನುರಾಗದನುಭಾವ ದಾಸೋಹಿ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಂಗಮ ಪರ್ವತವೆ ಲಿಂಗ ಶಿವಶಿಖರವೆ
ಗುರುಗುಹೇಶ್ವರನ ಪ್ರತಿರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುವೆ ರಾಜ್ಯದ ಸಿರಿಯೆ ಗುರುವೆ ರಾಷ್ಟ್ರದ ನಿಧಿಯೆ
ಗುರುವೆ ಮನುಕುಲದ ನಿಜದೀಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುವೆ ಭಕ್ತಿಯ ಬೀಜ ಗುರುವೆ ಮುಕ್ತಿಯ ತೇಜ
ಗುರುವೆ ಕಾರುಣ್ಯದ ಶಿವಶರಧಿ । ನೆನೆಯುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬುವಿ ಬಾನು ಜಲ ಅಗ್ನಿ ವಾಯುಗಳ ತಪಸಿನ
ಫಲವಾಗಿ ಅರಳಿದ ಪುಣ್ಯವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣತತ್ವದ ಸಿರಿಯೆ ಮಾನವ್ಯ ಮಂಗಳವೆ
ಮರ್ತ್ಯದ ಮಹಗೈವ ಶಿವಚರಿತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಲವ ಗೌರವಿಪ ಕರ್ತವ್ಯ ಶಿವಸೂರ್ಯ
ಶೀಲ ಸಾರ್ವಭೌಮ ಬುವಿ ಭಾಗ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ರಸಬಾಳೆ ನೀನಾದೆ ಸಿಹಿ ಹಲಸು ನೀನಾದೆ
ರಸತುಂಬಿ ಬಿರಿದ ದಾಳಿಂಬೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೂವಿನೊಳು ಕಂಪಾಗಿ ಹಣ್ಣಿನೊಳು ರಸವಾಗಿ
ತೆಂಗಿನೊಳು ತಂಪಾಗಿ ತೋರುತಿಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ಜ್ಞಾನದಾಹ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಸತ್ಯ ಸಾಕ್ಷಾತ್ಕಾರ ಪಡೆದವರು ಸಂತರು, ಮಹಂತರು; ಋಷಿ ಮುನಿಗಳು. ಅವರ ಹೃನ್ಮನಗಳಲ್ಲಿ ಸತ್ಯದ ಭಾನ. ನಡೆನುಡಿಗಳಲ್ಲಿ ಸತ್ಯದ ಬೆಳಕು. ಸತ್ಯದಲ್ಲಿ ಅವರು ಸದಾ ಮಗ್ನರು. ಸತ್ಯವೇ ಅವರ ಉಸಿರು.

ವಸ್ತುಗಳು ಶಬ್ದ, ಸ್ಪರ್ಶ, ರೂಪ, ರಸ, ಗಂಧಾದಿ ಗುಣಗಳಿಂದ ಕೂಡಿವೆ. ನಮ್ಮ ಶ್ರೋತ್ರಾದಿ ಇಂದ್ರಿಯಗಳಿಗೆ ಆ ಶಬ್ದಾದಿ ಗುಣಗಳನ್ನು ಗ್ರಹಿಸುವ ಸಾಮರ್ಥ್ಯವಿದೆ. ಈ ಪಂಚೇಂದ್ರಿಯಗಳಿಂದ ನಾವು ಪ್ರಪಂಚದ ಭೌತಿಕ ವಸ್ತುಗಳನ್ನು ಅರಿಯುತ್ತೇವೆ. ಇದು ಇಂದ್ರಿಯಾನುಭವ ಅಥವಾ ಪ್ರತ್ಯಕ್ಷೀಕರಣ.

ಇಲ್ಲೊಂದು ಹೂವಿದೆ. ಈ ಹೂವಿನ ಜ್ಞಾನ ಮಾಡಿಕೊಳ್ಳಲು ನಾವು ಗುಡ್ಡ ಬೆಟ್ಟಗಳನ್ನು ಹತ್ತಬೇಕಾಗಿಲ್ಲ, ಗೆಡ್ಡೆಗೆಣಸುಗಳನ್ನು ತಿಂದು ತಪಸ್ಸು ಆಚರಿಸಬೇಕಾಗಿಲ್ಲ, ಬೆಳಕಿನಲ್ಲಿ ಕಣ್ಣು ತೆರೆದರೆ ಸಾಕು ಹೂವು ಕಾಣುತ್ತದೆ.

ಅದೇ ಹೂವನ್ನು ನೋಡುತ್ತ ನಾವು ಆ ಹೂವಿನ ಸೌಂದರ್ಯದಲ್ಲಿ ಮುಳುಗಿಬಿಡಬೇಕು. ಮಗ್ನರಾಗಬೇಕು. ಆಗ ಹೂವಿಲ್ಲ, ನಾವೂ ಇಲ್ಲ. ಬರೀ ಸೌಂದರ್ಯ. ಆ ಸೌಂದರ್ಯವೇ ನಾವು. ನಾವೇ ಆ ಸೌಂದರ್ಯ ! ಹೀಗೆ ವಸ್ತುವಿನೊಂದಿಗೆ ಸಮಾಲೀನವಾಗುವಿಕೆಯೇ ಸಮಾಧಿ. ಅದರಿಂದ ವಸ್ತುಸಾಕ್ಷಾತ್ಕಾರ !

ವಸ್ತುಪ್ರತ್ಯಕ್ಷ ಯಾರಿಗಾದರೂ ಆಗುತ್ತದೆ. ಆದರೆ ವಸ್ತುವಿನ ಸಾಕ್ಷಾತ್ಕಾರವಾಗಲು ಕವಿಹೃದಯ ಬೇಕಾಗುತ್ತದೆ. ಹಾಡುವ ಹಕ್ಕಿ, ತೇಲುವ ಮೇಘ, ಸುರಿಯುವ ಮಳೆ, ಹರಿಯುವ ನದಿ, ಹಸಿರು ಸಿರಿ ಈ ಎಲ್ಲವನ್ನು ಕಂಡು ಮಹಾಕವಿ ಕಾಳಿದಾಸ, ರವೀಂದ್ರ, ವರ್ಡ್ಸ್‌ವರ್ಥ್ ಮೊದಲಾದವರು ಕಾವ್ಯಸಮಾಧಿಯನ್ನು ಅನುಭವಿಸಿದರು. ಅದೇ ಸೃಷ್ಟಿಯನ್ನು ನಾವು ನಿತ್ಯವೂ ನೋಡುತ್ತಿದ್ದರೂ ನಮಗೇಕೆ ಕಾವ್ಯ ಸಮಾಧಿ ಉಂಟಾಗುತ್ತಿಲ್ಲ? ಸೌಂದರ್ಯದ ಸಾಕ್ಷಾತ್ಕಾರ ಆಗುತ್ತಿಲ್ಲ? ಕಾರಣವು ಸ್ಪಷ್ಟ. ನಮಗೆ ಕವಿಹೃದಯವಿಲ್ಲ. ಸತ್ಯದೃಷ್ಟಿಯಿಲ್ಲ.

ಸಂಗೀತವನ್ನು ಕೇಳುತ್ತಲಿರುವ ಗಾನರಸಿಕನು ರಾಗ, ರಸ, ತಾಳ, ಲಯಗಳ ಮಾಧುರ್ಯದಲ್ಲಿ ಮೈಮರೆಯುತ್ತಾನೆ. ಪರಿಸರದ ಭಾನ ಅಡಗುತ್ತದೆ. ಸಂಗೀತದಲ್ಲಿ ಸಮರಸನಾಗುತ್ತಾನೆ. ಅದು ಸಂಗೀತಸೌಂದರ್ಯದ ಸಾಕ್ಷಾತ್ಕಾರ.

ಹೀಗೆ ವಸ್ತುವನ್ನು ಅರಿಯುವುದು ಜ್ಞಾನ; ಆ ವಸ್ತುವಿನ ಅಸ್ತಿತ್ವದಲ್ಲಿ ಬೆರೆಯುವುದು ಸಾಕ್ಷಾತ್ಕಾರ. ಜ್ಞಾನದಲ್ಲಿ ವಸ್ತು-ವ್ಯಕ್ತಿಗಳ ಮಧ್ಯ ಭೇದವಿದೆ. ಸಾಕ್ಷಾತ್ಕಾರದಲ್ಲಿ ಈ ಭೇದವಿಲ್ಲ.

ಆಧ್ಯಾತ್ಮ ಕ್ಷೇತ್ರದಲ್ಲಿ ತತ್ತ್ವಜ್ಞಾನಿಗಳು ಸಾಕಷ್ಟು ಜನ. ಸತ್ಯಸಾಕ್ಷಾತ್ಕಾರಿಗಳು ಅಪರೂಪ. ವಿಪುಲವಾಗಿ ಓದಿದರೆ, ಕೇಳಿದರೆ ಯಾರಾದರೂ ಜ್ಞಾನಿಗಳಾಗುತ್ತಾರೆ. ಆದರೆ ಸಾಕ್ಷಾತ್ಕಾರಿಗಳಾಗುವುದು ಅಷ್ಟು ಸುಲಭವಲ್ಲ.

ಕೇಳಿದ ಶಬ್ದ ತಲೆಯೊಳಗೆ ಮೂಡಿನಿಂತರೆ ಆತ ಜ್ಞಾನಿ. ಅದು ಹೃದಯಕ್ಕೆ ಇಳಿದು ಅಂತರಂಗವನ್ನು ಸ್ಪರ್ಶಿಸಿದರೆ ಆತ ಸಾಕ್ಷಾತ್ಕಾರಿ. ಅವನು ಸದಾ ಸತ್ಯವಸ್ತುವಿನಲ್ಲಿ ಸಮಾವಿಷ್ಟ ! ನಿಮಗ್ನ !

ಇಂಗ್ಲೆಂಡ್ ದೇಶದಲ್ಲಿ ಒಬ್ಬ ಸುಪ್ರಸಿದ್ಧ ಶಸ್ತ್ರವೈದ್ಯನಿದ್ದ (Surgeon). ಒಂದು ದಿನ ಯೂರೋಪದೇಶದ ಬೇರೆ ಬೇರೆ ಭಾಗದಿಂದ ಅನೇಕ ವೈದ್ಯರು ಈತನ ಆಸ್ಪತ್ರೆಗೆ ಬಂದಿದ್ದರು. ಇವನು ಮಾಡುತ್ತಿದ್ದ ಶಸ್ತ್ರಚಿಕಿತ್ಸೆಯನ್ನು ನೋಡುತ್ತಿದ್ದರು. ಎರಡು ಗಂಟೆಯವರೆಗೆ ಅವನು ಮಗ್ನನಾಗಿ ಶಸ್ತ್ರಚಿಕಿತ್ಸೆ ಮಾಡಿ ಹೊರಬಂದ.

ಯುರೋಪದಿಂದ ಬಂದಿದ್ದ ವೈದ್ಯರು ಕೇಳಿದರು: "ನಾವು ಶಸ್ತ್ರಚಿಕಿತ್ಸೆ ಮಾಡುವಾಗ ಬೇರೆ ಯಾರಾದರೊಬ್ಬರು ಬಂದರೆ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ನಮ್ಮ ಮನವು ವಿಚಲಿತವಾಗುತ್ತದೆ. ಇಷ್ಟು ಜನ ನಾವು ನಿಮ್ಮ ಸುತ್ತುವರೆದಿದ್ದೆವು. ಆದರೆ ಎರಡು ಗಂಟೆಯವರೆಗೆ ನೀವು ಮೇಲೆ ತಲೆ ಎತ್ತಿಯೂ ನೋಡಲಿಲ್ಲ, ಎಂಥಾ ನಿಮಗ್ನತೆ ನಿಮ್ಮದು ! ಇದು ನಿಮಗೆ ಹೇಗೆ ಸಾಧ್ಯವಾಯಿತು?''

ಆ ಶಸ್ತ್ರವೈದ್ಯ ಹೇಳಿದ, ''ನಾನು ಶಸ್ತ್ರಚಿಕಿತ್ಸೆಗೆ ತೊಡಗುತ್ತಿದ್ದಂತೆಯೇ ನನ್ನನ್ನು ನಾನು ಮರೆಯುತ್ತೇನೆ. ಈ ರೋಗಿಯನ್ನು ರಕ್ಷಿಸುವಂಥ ಹಾಗೂ ನನಗೆ ಶಸ್ತ್ರಚಿಕಿತ್ಸೆ ಮಾಡಲು ಚೈತನ್ಯಕೊಡುವಂಥ ಭಗವದ್ಭಾವದಲ್ಲಿ ಮುಳುಗಿಬಿಡುತ್ತೇನೆ. ನನಗೆ ಶಸ್ತ್ರಚಿಕಿತ್ಸೆ ಮುಗಿದದ್ದೇ ಗೊತ್ತಾಗುವುದಿಲ್ಲ!''

ಅದು ನಿಜವಾದ ಕಾರ್ಯಸಾಕ್ಷಾತ್ಕಾರ. ನಮಗಾದರೋ ಆ ರೋಗಿಯ ಜೇಬಿನತ್ತ ಲಕ್ಷ್ಯ. ಸುತ್ತುವರಿದ ಜನರಿಗೆ ನಮ್ಮ ವೈದ್ಯಕೀಯ ಕಲಾಕೌಶಲ್ಯ ತೋರಿಸುವ ಭಾವ. ಹೀಗಿರುವಾಗ ನಮಗೆ ಕಾರ್ಯಮಗ್ನತೆ ಸಾಧಿಸುವುದು ಹೇಗೆ ಸಾಧ್ಯ?

ಹಾಗೆಂದ ಮಾತ್ರಕ್ಕೆ ನಮಗೆ ಮಗ್ನತೆಯೇ ಇಲ್ಲವೆಂದಲ್ಲ. ಒಬ್ಬ ಸಿಗಾರ ಸೇದುತ್ತಿದ್ದಾನೆ. ಆತನ ಬೆರಳು ಸುಡುತ್ತಲಿದೆ. ಆದರೂ ಅವನಿಗದು ಗೊತ್ತಾಗುತ್ತಿಲ್ಲ. ಇದು ಮಗ್ನತೆಯಲ್ಲವೆ? ಇನ್ನೊಬ್ಬ ಕುಡಿಯುತ್ತಾನೆ. ಅನಾರೋಗ್ಯವಾಗುತ್ತದೆ. ಮನೆಮಾರು ಕಳೆದುಕೊಳ್ಳುತ್ತಾನೆ. ಸತಿಸುತರು ಉಪವಾಸ ಬೀಳುತ್ತಾರೆ. ಅದರ ಪರಿವೆಯೇ ಅವನಿಗೆ ಇರುವುದಿಲ್ಲ. ಆತನಿಗೆ ಅಷ್ಟು ನಿಮಗ್ನತೆ ಕುಡಿತದಲ್ಲಿ! ಈ ಬಗೆಯಾದ ಮಗ್ನತೆ ಹಿತವಸ್ತು, ಹಿತಕಾರ್ಯದಲ್ಲಿ ಇರುವುದಾದರೆ ಅದೇ ಸಾಕ್ಷಾತ್ಕಾರ.

ಕವಿಗಳು, ಕಲಾವಿದರು ತಮ್ಮ ತಮ್ಮ ಕಾರ್ಯಕ್ಷೇತ್ರಗಳಲ್ಲಿ ನಿಮಗ್ನರು. ಅಂತಲೇ ಅವರಿಗೆ ರಸಾನುಭವ, ರಸಸಾಕ್ಷಾತ್ಕಾರ. ಅದರಂತೆಯೇ ಸತ್ಯಶೋಧಕನು ಪರಮಸತ್ಯದಲ್ಲಿ ನಿಮಗ್ನನಾಗಿ ಸತ್ಯಸಾಮರಸ್ಯವನ್ನು ಅನುಭವಿಸುತ್ತಾನೆ.

ಕಾಶ್ಮೀರ ದೇಶವು ನಂದನವನ, ಭೂಕೈಲಾಸ. ಮೋಳಿಗೆಯ ಮಾರಯ್ಯ ಆ ದೇಶದ ದೊರೆ. ಹೇರಳವಾದ ಸಿರಿ-ಸಂಪದ, ಭೋಗಭಾಗ್ಯಕ್ಕೇನು ಕೊರತೆಯಿರಲಿಲ್ಲ. ಮಾರಯ್ಯನು ಅದನ್ನೆಲ್ಲ ಸಲೀಸಾಗಿ ಬಿಟ್ಟುಕೊಟ್ಟ, ಜ್ಞಾನಸುಧೆಯನ್ನು ಬಯಸಿ ಭಕ್ತಿಭಂಡಾರಿ ಬಸವಣ್ಣನವರ ಸಾಮೀಪ್ಯಕ್ಕೆ ಬಂದ. ರಾಜ್ಯವನ್ನಾಳಿದ ಕೈಗಳಿಂದ ಕಟ್ಟಿಗೆ ಒಡೆದು ಮಾರುವ ಕಾಯಕ ಮಾಡಿದ. ಮಾರಯ್ಯನ ಆತ್ಮಜ್ಞಾನದಾಹ ಅಷ್ಟು ಬಲಿಷ್ಠವಾಗಿತ್ತು. ಆದ್ದರಿಂದ ಅವನ ಸತ್ಯಸಾಕ್ಷಾತ್ಕಾರದ ಸಾಧನೆಗೆ ಯಾವುದೂ ಅಡ್ಡಿಯಾಗಲಿಲ್ಲ.

ನಾವು ಮಠ-ಮಂದಿರಕ್ಕೆ ಪುರಾಣ-ಪ್ರವಚನ ಕೇಳಲು, ಗುರುದರ್ಶನ ಪಡೆಯಲು ಹೊರಟಿರುತ್ತೇವೆ. ಅದೇ ಸಮಯಕ್ಕೆ ನಮ್ಮ ಅಂಗಡಿಗೆ ಒಂದು ಸಣ್ಣ ಗಿರಾಕಿ ಬರುತ್ತದೆ. ಅಥವಾ ನಮ್ಮ ಮನೆಗೆ ನೆಂಟರೋ, ನಾಯಕರೋ ಬರುತ್ತಾರೆ. ಅಷ್ಟೇ ನೆಪ ಸಾಕಾಗುತ್ತದೆ. ಗುರುದೇವರ ದರ್ಶನ ನಿಂತುಬಿಡುತ್ತದೆ. ನಮ್ಮದು ಇದೆಂಥ ಭಕ್ತಿಬಯಕೆ, ಜ್ಞಾನದಾಹ !

ಕೋಗಿಲೆಯು ವಸಂತಮಾಸದ ಅರುಣೋದಯಕ್ಕಾಗಿ ಕಾಯುತ್ತದೆ. ಅದರ ಎದೆಯಲ್ಲಿ ತರತರದ ಹಾಡುಗಳು ತುಂಬಿ ನಿಂದಿವೆ. ಅರುಣ ತೋರುವುದೇ ತಡ ಕೋಗಿಲೆಯು ಮನದುಂಬಿ ಹಾಡುತ್ತದೆ. ಸಚ್ಛಿಷ್ಯನೂ ಒಂದು ಬಗೆಯ ಕೋಗಿಲೆ. ಸದ್ಗುರುವೆಂಬ ವಸಂತರವಿಯ ಆಗಮನಕ್ಕಾಗಿ ಆತ ಕಾಯುತ್ತಾನೆ. ಆ ಜ್ಞಾನಭಾಸ್ಕರನ ಉದಯವಾಗುತ್ತಲೆ ಹೃದಯದುಂಬಿ ಆತ್ಮಗಾನ ಮಾಡಿ ಧನ್ಯನಾಗುತ್ತಾನೆ. ಈ ಉತ್ಕಟ ಜ್ಞಾನಪಿಪಾಸೆ ಸತ್ಯಸಾಧಕನಲ್ಲಿರಬೇಕು.

ನಮ್ಮ ತರುಣರಿಗೂ ಬಯಕೆಯಾಗುತ್ತವೆ, ನೋಡಬೇಕು. ಅವರಿಗೆ ಲಗ್ನದ ಬಯಕೆಯಾದಾಗ ಮನೆಯಲ್ಲಿ ಕಾರಣವಿಲ್ಲದೆ ಸಿಡಿಮಿಡಿಗೊಳ್ಳುತ್ತಾರೆ. ಗುಡಿಗುಂಡಾರ ಅಲೆದಾಡಿ ದೇವರಿಗೆ ಬೇಡಿಕೊಳ್ಳುತ್ತಾರೆ, 'ಬೇಗ ಲಗ್ನದ ಯೋಗವಾಗಲಿ' ಎಂದು. ಒಬ್ಬ ತರುಣನು ಮಾರುತಿ ಮಂದಿರಕ್ಕೆ ಹೋಗಿ ''ವಾಯುಪುತ್ರ, ನನಗೆ ಬೇಗ ಸತಿಯ ಕರುಣಿಸು'' ಎಂದು ಬೇಡಿಕೊಂಡ. ''ಶತಮಾನಗಳಾದರೂ ನಾನೇ ಲಗ್ನವಿಲ್ಲದೆ ನಿಂತಿದ್ದೇನೆ'' ಎಂದನಂತೆ ಮಾರುತಿ ! ನಮ್ಮ ತರುಣರ ಪ್ರಾಪಂಚಿಕ ಬಯಕೆ ಎಷ್ಟು ತೀವ್ರವಾಗಿದೆ ಎಂದರೆ – ಯಾರಿಗೆ ಏನು ಬೇಡಬೇಕೆಂಬುದೂ ಅವರಿಗೆ ತಿಳಿಯದಾಗಿದೆ.

ನಚಿಕೇತ ಎಂಟು ವರ್ಷದ ಬಾಲಕ. ಕಾರಣಾಂತರದಿಂದ ಕಾಲಪುರುಷನಾದ ಯಮಧರ್ಮನ ಬಳಿಗೆ ಹೋದ. ಬಾಲಕನ ಧೈರ್ಯ ಕಂಡು ಯಮಧರ್ಮರಾಜ ಸಂತುಷ್ಟನಾದ. ''ನಿನಗೇನು ವರ ಬೇಕು? ಬೇಡು, ಕೊಡುವೆ'' ಎಂದ. ''ಯಮಧರ್ಮ ನನಗೆ ಆತ್ಮವಿದ್ಯೆಯನ್ನು ಕೊಡು'' ಎಂದ ಬಾಲಕ ನಚಿಕೇತ.

''ನೀನಿನ್ನೂ ಚಿಕ್ಕವನು, ಕಠಿಣವಾದ ಆತ್ಮವಿದ್ಯೆ ನಿನಗೇಕೆ? ಬೇರೆ ಏನಾದರೂ ಕೇಳು. ಲೋಕದಲ್ಲಿ ಬಲ್ಲವರು, ಪಂಡಿತರು





ತೀರ್ಥಕ್ಷೇತ್ರಗಳಿಗೆ ಹೋಗಿ ವ್ರತಾಚರಣೆಗಳನ್ನು ಮಾಡಿ ದೇವರಲ್ಲಿ ಅನೇಕ ವರಗಳನ್ನು ಬೇಡುತ್ತಾರೆ. ಆ ಎಲ್ಲ ವರಗಳನ್ನು ನಾನು ನಿನಗೆ ಕೊಡುತ್ತೇನೆ ಬೇಡು'' ಎಂದು ಯಮಧರ್ಮ ಹೇಳಿದ.

*ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ*
*ಸರ್ವಾನ್ ಕಾಮಾಂಶ್ಛಂದತಃ ಪ್ರಾರ್ಥಯಸ್ವ ॥ ೨೫(೧) ಕ.ಉ.*

''ಅಷ್ಟೇ ಅಲ್ಲ, ಈ ಜಗತ್ತಿನಲ್ಲಿ ಅತ್ಯಂತ ದುರ್ಲಭವಾದುದು ಏನೇನು ಇದೆಯೋ ಅದನ್ನೆಲ್ಲಾ ಬೇಡು ಕೊಡುತ್ತೇನೆ. ಅಪಾರ ಸಂಪದ, ಅಧಿಕಾರ, ರಾಜ್ಯಗದ್ದುಗೆ, ಸೌಂದರ್ಯ, ಚಿರಾಯುಷ್ಯ ಏನಾದರೂ ಬೇಡು ಕೊಡುತ್ತೇನೆ'' ಎಂದು ಯಮಧರ್ಮನು ನಚಿಕೇತನಿಗೆ ಅನಾತ್ಮ ವಿಷಯಗಳ ಪ್ರಲೋಭನೆ ಒಡ್ಡಿದ.

*ಶ್ವೋಭಾವಾಮರ್ತ್ಯಸ್ಯ ಯದಂತಕೈತತ್*
*ಸರ್ವೇಂದ್ರಿಯಾಣಾಂ ಜರಯಂತಿ ತೇಜಃ ।*
*ಅಪಿ ಸರ್ವಂ ಜೀವಿತಮಲ್ಪಮೇವ*
*ತವೈವ ವಾಹಾಸ್ತವನೃತ್ಯಗೀತೇ ॥ ೨೬ (೧) ಕ.ಉ.*

''ನೀನು ಕೊಡುವ ಈ ವರಗಳೆಲ್ಲ ನಶ್ವರವಾಗಿವೆ, ನನಗೆ ಅಮರವಾದ ಆತ್ಮವಿದ್ಯೆ ಒಂದನ್ನೇ ಕೊಡು'' ಎಂದನು ನಚಿಕೇತ.

''ಇದುವರೆಗೆ ನೀನು ಭೂಮಂಡಲದಲ್ಲಿ ಕೊಟ್ಟ ಸಂಪತ್ತನ್ನು ಯಾರೂ ಜೊತೆಗೆ ಒಯ್ದಿಲ್ಲ. ಮೇಲಾಗಿ ಈ ಐಶ್ವರ್ಯ ಎಂದೂ ಶಾಶ್ವತವಲ್ಲ. ಇನ್ನು ನೀನು ಬೇಡಿದಷ್ಟು ಆಯುಷ್ಯ ಕೊಡುತ್ತೇನೆ ಎನ್ನುತ್ತೀಯೆ. ಆದರೆ ಮನುಷ್ಯನಿಗೆ ಎಷ್ಟು ವರ್ಷ ಬದುಕಿದರೂ ಸಾಕೆನ್ನಿಸುವುದಿಲ್ಲ.'' (ಯಯಾತಿ ಮಹಾರಾಜನು ವಿಷಯಭೋಗದಾಸೆಯಿಂದ ಮಗನ ಆಯುಷ್ಯವನ್ನೂ ಸಹ ಬೇಡಲು ನಾಚಲಿಲ್ಲ).

''ಇನ್ನು ನೀನು ಕೊಡುವ ವಿಷಯಭೋಗವೆಲ್ಲಾ ನಮ್ಮನ್ನು ಶಕ್ತಿಹೀನರನ್ನಾಗಿ ಮಾಡುತ್ತವೆ. ನಮ್ಮ ಕಣ್ಣಿನ ತೇಜ, ಬುದಿಯ ಓಜ, ಮನದ ಉತ್ಸಾಹ, ಮೈಕಾವನ್ನೆಲ್ಲಾ ಈ ವಿಷಯಗಳು ಹರಣ ಮಾಡುತ್ತವೆ. ಆದ್ದರಿಂದ ನೀನು ಕೊಡಬೇಕೆಂದಿರುವ ಆಯುಷ್ಯ, ಐಶ್ವರ್ಯ, ಇತರ ಭೋಗವಾವುದೂ ನನಗೆ ಬೇಡ. ಅವುಗಳೆಲ್ಲ ನಿನಗೇ ಇರಲಿ. ಅಮೌಲ್ಯವಾದ ಆತ್ಮಜ್ಞಾನವೊಂದನ್ನೇ ಕರುಣಿಸು'' ಎಂದು ಜಾಣನಾದ ಬಾಲಕ ನಚಿಕೇತನು ಯಮಧರ್ಮನಿಗೆ ಹೇಳಿದ. ನಚಿಕೇತನ ಆತ್ಮಜ್ಞಾನದ ಪಿಪಾಸೆಯು ಜಗನ್ಮಾನ್ಯ ! ವಿಶ್ವ ಆಧ್ಯಾತ್ಮ ಸಾಧಕರಿಗೆಲ್ಲ ಆದರ್ಶ !

ನೌಕರರಿಗೆ ತಿಂಗಳ ಮೊದಲನೆ ವಾರದಲ್ಲಿರುವ ಉತ್ಸಾಹ ಕೊನೆಯ ವಾರದಲ್ಲಿರುವುದಿಲ್ಲ. ಮೊದಲನೆಯ ವಾರದಲ್ಲಿ ಅವರ ಕಿಸೆಗಳು ತುಂಬಿರುವಾಗ ಅವರಿಗೆ ಮುಗಿಲು ಮೂರೇ ಗೇಣು ! ಅವರೇ ಇಂದ್ರರು, ಅವರೇ ಚಂದ್ರರು ! ಮುಂದೆ ಮೂರನೆಯ ವಾರದಲ್ಲಿ ಕಿಸೆ ಖಾಲಿಯಾದಾಗ ಮನೆಯ ನೆನಪಾದರೆ ಅವರಿಗೆ ಭಯವಾಗುತ್ತದೆ.

ನೆಪೋಲಿಯನ್ ಬೋನಾಪಾರ್ಟನು ತಾರುಣ್ಯದಲ್ಲಿದ್ದಾಗ ''ಅಸಾಧ್ಯವೆನ್ನುವುದು ಮೂರ್ಖರ ಶಬ್ದಕೋಶದಲ್ಲಿ ದೊರೆಯುತ್ತದೆ'' ಎನ್ನುತ್ತಿದ್ದ. ಮುಂದೆ ಅದೇ ನೆಪೋಲಿಯನ್ ಸೇಂಟ್ ಹೆಲೆನ್ ಸೆರೆಮನೆಯಲ್ಲಿದ್ದಾಗ ಹೇಳಿದ್ದೇನು? 'ಸರ್ವಸಾಧ್ಯವೆನ್ನುವುದೇ ಮೂರ್ಖರ ಶಬ್ದಕೋಶದಲ್ಲಿ ದೊರೆಯುತ್ತದೆ !' ಎಂದಲ್ಲವೆ? ಎಂದಾಗ ಜಗತ್ತಿನಲ್ಲಿ ಲೌಕಿಕವಾದ ಯಾವ ಐಶ್ವರ್ಯ, ಅಧಿಕಾರ ಸ್ಥಿರವಾಗಿದೆ? ನಚಿಕೇತನು ಬಯಸಿದ ಆತ್ಮ ಜ್ಞಾನವೊಂದೇ ಚಿರ-ಸ್ಥಿರವಾದ ಅಲೌಕಿಕ ಸಂಪದ. ಸತ್ಯಸಾಧಕನು ನಿತ್ಯವೂ ಅದನ್ನೇ ಬಯಸಬೇಕು ! ಹೇಗೆ?

ಬೇಸಿಗೆಯಲ್ಲಿ ಭೂಮಿ ಕಾಯ್ದು ಧೂಳಿದ್ದಿರುತ್ತದೆ. ಮಣ್ಣು ಹುಡಿಹುಡಿಯಾಗಿ ಭೂಮಿ ಬಾಯ್ದೆರೆದಿರುತ್ತದೆ. ತನ್ನೊಡಲಿನಲ್ಲಿ ಕೋಟ್ಯಂತರ ಸಸಿಯ ಬೀಜಗಳನ್ನು ತುಂಬಿಕೊಂಡು ಭೂಮಿಯು ಮಳೆಗಾಗಿ ಹಂಬಲಿಸುತ್ತದೆ. ಹಂಬಲಿ ಹಂಬಲಿಸಿ ಒಂದು ದಿನ ಅದರ ಹಂಬಲವು ಕೈಗೂಡುತ್ತದೆ. ಮೇಘವು ಅಮೋಘವಾದ ಮಳೆಗರೆಯುತ್ತದೆ. ಆ ಭೋರ್ಗರೆವ ಮಳೆಯಲ್ಲಿ ತೊಯ್ದು ತೃಪ್ತವಾದ ಭೂಮಿಯಿಂದ ಒಂದು ಬಗೆಯ ಸಂತಸದ ಸುವಾಸನೆ ಹೊರಹೊಮ್ಮುತ್ತದೆ. ಅಲ್ಲಿಂದ ಮುಂದೆ ಜಗವೇ ನಂದನವನವಾಗಿ ಕಂಗೊಳಿಸುತ್ತದೆ.

ಹಾಗೆಯೇ ಸಚ್ಛಿಷ್ಯನು ಗುರುವಿನ ಜ್ಞಾನಾಮೃತದ ವರ್ಷಾಗಮನಕ್ಕಾಗಿ ಕಾಯಬೇಕು. ಹಂಬಲಿಸಿ ತಪಿಸಬೇಕು. ಉನ್ಮತ್ತನಾಗಬೇಕು. ಶ್ರೀಗುರುದರ್ಶನವಾಗುತ್ತಲೇ ಭಕ್ತಿಯಲ್ಲಿ ಹೂವಾಗಿ ಅರಳಿ, ಅನುಭಾವದಲ್ಲಿ ಹಣ್ಣಾಗಿ ಮಾಗಬೇಕು. ಶ್ರೀ ಗುರುವಿನಡಿಗೆ ತಾನೇ ಎಡೆಯಾಗಬೇಕು. ಸತ್ಯಸಾಧಕನಲ್ಲಿರುವ ಈ ಜ್ಞಾನದಾಹವೇ ಮುಂದೆ ಆತ್ಮಸಾಕ್ಷಾತ್ಕಾರಕ್ಕೆ, ಆನಾರೆಂಬುದನ್ನು ಅರಿಯುವುದಕ್ಕೆ ಹಸನಾದ ಭೂಮಿಕೆಯಾಗುತ್ತದೆ.

(ಕೃಪೆ: ಭಾಗವಚ್ಚಿಂತನ)



# ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಈಚಿನ ಶೋಧಗಳು

- ಡಾ. ಎಂ.ಜಿ. ನಾಗರಾಜ್ *

*(ಕಳೆದ ಸಂಚಿಕೆಯಿಂದ)*


ಹರದನಹಳ್ಳಿಯ ಗೋಸಲಾರ್ಯ ಪೀಠ (ಹರದನಹಳ್ಳಿ ಮಠ)ದ ಸನಿಹನೋಟ

ಹರದನಹಳ್ಳಿಯಲ್ಲಿ ಗೋಸಲಾರ್ಯಯತಿಗಳಿಗೆ ವಾಣಿಜ್ಯಪುರಿ ಮಠ ನಿರ್ಮಾಣ ಹಾಗೂ ಅದರ ಆಧಿಪತ್ಯ; ಕ್ರಿ.ಶ. ೧೨೬೩ರಲ್ಲಿಯೆ ಹೊಯ್ಸಳ ಮಹಾಪ್ರಧಾನ ಮಾಧವ ದಂಡನಾಯಕನ ಕಾಲದಲ್ಲಿ ಹರದನಹಳ್ಳಿಯಲ್ಲಿ ನಿರ್ಮಾಣವಾಗಿದ್ದ (ಐತಿಹ್ಯದ ಹೆಸರಾದ) ದಿವ್ಯಲಿಂಗ ಅಣಿಲೇಶ್ವರ ದೇಗುಲದ ಮೇಲುಸ್ತುವಾರಿ ಇತ್ತು; ಗುರು ಗೋಸಲಾರ್ಯಯತಿ ಸಮ್ಮುಖದಲ್ಲಿ ಪಂಚವೀರಶೈವಮಠಗಳು; ಮಡಿವಾಳದ ಶಿವನಂಕಾರೇಶ್ವರರಿಗೆ ಚಂದ್ರುಣಿಮಠ; ಮಾದೇಶ್ವರರಿಗೆ ಕಂಚಿ ತೆಲುಗಾಣ್ಯಮಠ, ಪಂದೇಶ್ವರರಿಗೆ ಶ್ರೀ ವಾಣಿಜ್ಯಪುರಿ ಮಠ; ಸಿದ್ಧೇಶ್ವರರಿಗೆ ಕೆಂಬಲ್ಲು ಮಠ, ಬ್ರಹ್ಮೇಶ್ವರರಿಗೆ ಮಹಲಿಂಗಿಮಠ ಎಂಬ ಪಂಚೈದು ದಿಶಾನೆಲೆಗಳಲ್ಲಿ ಇವುಗಳಿರುವುದು ಗಮನಾರ್ಹ. ಪಂಚೈದು ಮಠಗಳನ್ನು ವಿಧಿಸುವಲ್ಲಿ ಲಿಂಗಗಳ ಹೆಸರನ್ನು ಆಯಾ ಮಠಗಳ ಗುರುಗಳ ಹೆಸರಿಗೂ ಅನ್ವಯಿಸಿ ಹೇಳಿದಂತಿದೆ). ಅವುಗಳ ಅಸ್ತಿತ್ವವನ್ನು ಹರದನಹಳ್ಳಿಯ ಶಾಸನೋಕ್ತವಾಗಿ (ಚಾ.ನಗರ ೨೯೨) ಹೇಳಲಾಗಿದೆ. ಅಂತಾಗಿ ಗೋಸಲಾರ್ಯರು ಪಡೆದಿದ್ದ ಸೋಗಲ ಪರಂಪರೆ ಇಲ್ಲಿ ಪೂರ್ವ ಗುರುವಾಶ್ರಮ ಸ್ಮರಣಮುಖಿಯಾಗಿ ಅವರ ಹೆಸರಿನಲ್ಲಿ ಇಲ್ಲಿ ರೂಢಿಯಾಗಿ ಆರಂಭಗೊಂಡಿತೆನ್ನಬೇಕು. ಈ ಮೇಲಿನ ಐದು ಮಠಗಳ ನಿರ್ಮಾಣವು ಐದು ವೈಷ್ಣವಾದಿಗಳನ್ನು ಗೆದ್ದು ಶಿವಮತವನ್ನು ಉದ್ಧರಿಸಿದ ಸಂಕೇತವಾಗಿದೆ ಎಂಬ ಅಭಿಪ್ರಾಯವೂ ಇದೆ*[೭].

೭. ಪ್ರೊ. ಸಿ. ಮಹದೇವಪ್ಪ, ಅದೇ. ಪು. ೨೧೪.

ಗೋಸಲಾರ್ಯ ಯತೀಶ್ವರರನ್ನು, ಹರದನಹಳ್ಳಿ ತಾಮ್ರಶಾಸನವು *'ಶ್ರೀಮತ್ ಸಚ್ಚಿದಾನಂದ ನಿತ್ಯಸಂಪೂರ್ಣ ಅವಿರಳ ಜ್ಞಾನಾನಂದ ಪರಂಜ್ಯೋತಿ ಸ್ವರೂಪ*
*.... ಶ್ರುತಿಸ್ಮೃತಿ ಪುರಾಣಾಗಮೇತಿಹಾಸ* ***ಷಡಸ್ಥಲಪರಬ್ರಹ್ಮೇಷ್ಟ ಲಿಂಗಾರಾಧಕ*** *... ಶ್ರೀಮದ್ವಾಣಿಜ್ಯಪುರಿ*
***ಮಠಾಧಿಷ್ಠಿತ*** *ಅನಾದಿ ಮರುಳಾರ್ಯ ವಂಶಪರಂಪರಾಗತ* ***ಪರಿವಿಡಿದ್ರಾಜಗುರು ಅಪ್ಪಣಾರ್ಯ*** *ನಿಜಗರ್ಭ ಸಂಜನಿತವೇದ ವೇದಾಂತೋಪನಿಷತ್ಸಾರೋದಿತ ನಿಜಪಟ್ಟಮೂರ್ತಿ ....''*

ಎಂದೆಲ್ಲ ಸ್ತುತಿಸಿರುವಲ್ಲಿ ವೀರಶೈವದ ಗುರುಸ್ತಲ ಹಾಗೂ ನಿರಂಜನಸ್ತಲದ ಸಾಮರಸ್ಯ ಸಹಯೋಗದ ಪ್ರತಿನಿಧಿಯಾಗಿ ಅವರು ಕಂಡುಬರುತ್ತಾರೆ. ಇಂಥ ಸಾಂಸ್ಕೃತಿಕ ವ್ಯಕ್ತಿತ್ವವು ಧರ್ಮರಕ್ಷಣೆಗಾಗಿ ದೇಶಸಂಚಾರ ಮಾಡುವಲ್ಲಿ ಹರದನಹಳ್ಳಿಯಿಂದ ಚೆನ್ನಪಟ್ಟಣ ತಾಲೂಕು ಸೋಗಾಲ, ಕೊರಟಗೆರೆ ತಾ. ಸಿಂಗ್ರೀಹಳ್ಳಿ, ನಂತರ ಶಿವಗಂಗೆ, ಮೂಲಕ ಕ್ಯಾತ್ಸಂದ್ರ-ಸಿದ್ಧಗಂಗಾಕ್ಷೇತ್ರಕ್ಕೆ ಬಂದುದನ್ನು ಐತಿಹ್ಯಗಳಿರುವಲ್ಲಿ ಗಮನಿಸಿ ಹೇಳಬೇಕಾಗಿದೆ.

**ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣದಲ್ಲಿ**

*'.... ಇಂತಿವರ್ ಮೊದಲಾದ ವಿರತರೇಳ್ನೂರ್ವರುಂ ಸಂತತಂಗೂಡಿ ಷಟ್‌ಸ್ಥಲ ಮಾರ್ಗಮಂ ಧರೆಯೊಳಂತರಿಸದಂತೆ ನೆಲೆಗೊಳಿಸುತೆ'*

- ಎಂದು ತೋಂಟದ ಸಿದ್ಧಲಿಂಗ ಶಿವಯೋಗಿಗಳ (ಅನುಸರಿಸಿ) ಹಿಂದೆ ೭೦೦ ವಿರತರು ೩ ಸಾವಿರ ಚರಮೂರ್ತಿಗಳು ಇದ್ದ ಬಗ್ಗೆ ಹೇಳಿದೆ. ಈ ಪಟ್ಟಿಯಲ್ಲಿ ಪಟ್ಟಾಧ್ಯಕ್ಷಸ್ವಾಮಿಗಳ ಪರಂಪರೆಯವರು, ವಿರಕ್ತರು, ಶರಣ ಸಂತತಿಯವರು ಇದ್ದರು. (ಪೆಸರ್ವಡೆದ ವಿರತರೇಳ್ನೂರ್ವರು ತೋಂಟದ ಯತೀಶನಂ ಕೂಡಿದ್ದರು)೮, ಎನ್ನುವಲ್ಲಿ ಗುರುವಿರಕ್ತ ಸಮನ್ವಯ ಸಂಗಮವಿದೆ. ಅಲ್ಲದೆ 'ವಿರತ' ಶಬ್ದ ಪ್ರಯೋಗವು ಕೇವಲ ಜಂಗಮ ಸಂಪ್ರದಾಯದವರಿಗೇ ಅಲ್ಲದೆ ಪಟ್ಟಾಧ್ಯಕ್ಷರಿಗೂ ಸಂಬಂಧಪಟ್ಟ ಶಬ್ದವಾಗಿದೆ

* ನಂ. ೨೨೧, 'ಅನರ್ಘ್ಯ, ಶ್ರೀ ಜ.ಚ.ನಿ. ಕೃಪೆ' ೬೮ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦



ಸಂಶೋಧನೆ


ಹರದನಹಳ್ಳಿಯ ಗೋಸಲಸಿದ್ಧೇಶ್ವರ ಗದ್ದುಗೆ ಮಠದ ಮುಖಗೋಪುರ ಹಾಗೂ ಗೋಸಲಾರ್ಯ ಯತಿಗಳ ಪಿಠ

ಎಂದಿದ್ದಾರೆ ಪಂ. ಚನ್ನಪ್ಪ ಎರೆಸೀಮೆ*[೯]. ಈ ಪರಂಪರೆ ಗೋಸಲಾರ್ಯರಿಗೆ ತಮ್ಮ ಸೋಗಲಕ್ಷೇತ್ರಾಶ್ರಮದಿಂದಲೇ ಪ್ರೇರಣೆಯಾಗಿ, ಅವರ ಮುಂದಿನ ಹರದನಹಳ್ಳಿಯ ತೋಂಟದ ಸಿದ್ಧಲಿಂಗಯತಿಗಳಲ್ಲಿಯೂ ಮುಂದುವರಿಯಿತು. ಸಮರಸ ಶಿವಭಾವ ಸಂಬಂಧ ಪರಂಪರಾಗತವಾಗಿತ್ತು.

ಗೋಸಲಾರ್ಯರಿಗೆ ಸಿದ್ಧಗಂಗೆಯ ಪರಿಸರ ತ್ರಯಶರಣರ (ಮೇದಾರ ಕೇತಯ್ಯ, ಮಡಿವಾಳ ಮಾಚಯ್ಯ, ಸಿದ್ಧರಾಮ) ಉಪಾಸನಾಕ್ಷೇತ್ರವಾಗಿದ್ದ ಸಂಗತಿ ಹಾಗೂ ಅತ್ತ ಕಡೆ ಸಂಚರಿಸಲು, ಮಾಧವ ದಂಡನಾಯಕನ ಪುತ್ರ ಕೇತಯ್ಯದಂಡನಾಯಕ, ಹರದನಹಳ್ಳಿ ಪ್ರದೇಶದ ನಿರ್ವಹಣೆಗೆ (ಕ್ಯಾತ್ಸಂದ್ರ ಪ್ರದೇಶದಿಂದ) ನಿಯೋಜಿತನಾದಾಗ ಬಿನ್ನವಿಸಿದುದೂ ಕಾರಣವಾಗಿರುವಂತಿದೆ.

ಕೇತಯ್ಯ ದಂಡನಾಯಕನ ಹಿರಿಯ ವಂಶಿಕರು, ಹರದನಹಳ್ಳಿ ಪ್ರದೇಶ ವಲಯದಲ್ಲಿ ೧೪ನೆಯ ಶತಮಾನದಲ್ಲಿ ಆಳ್ವಿಕೆಗೆ ಹೊಯ್ಸಳರಿಂದ ನಿಯುಕ್ತರಾಗಿದ್ದುದು ಶಾಸನಗಳಿಂದ ಗಮನಕ್ಕೆ ಬರುತ್ತದೆ. ಕ್ರಿ.ಶ.೧೩೨೦ರ ಹೊಯ್ಸಳ ಮೂರನೇ ಬಲ್ಲಾಳ ದೇವರಸ, ಶ್ರೀಮನ್ಮಹಾಪ್ರಧಾನ ಕೇತಯ್ಯ ದಂಡನಾಯಕನಿಗೆ ಸಕಾರುಣ್ಯದಿಂದ ಕುಡುಗುನಾಡನ್ನು (ತೆರಕಣಾಂಬಿ ಚಾಮರಾಜನಗರದಿಂದ ಕೊಡಗಿನವರೆಗಿನ ಚಾಚಿದ ಪ್ರದೇಶ) ಪಾಲಿಸಲು ಕೊಟ್ಟ ವಿಷಯ ಶಾಸನೋಕ್ತವಿರ್ದೆ. ವೀರಮಾಧವ ದಂಣ್ನಾಯಕರ ಕುಮಾರ ವೀರಕೇತಯ ದಂಡನಾಯಕನು ಪದಿನಾಲ್ಕು ನಾಡನ್ನು ತೆರಕಣಾಂಬಿ ನೆಲೆವೀಡಿನಿಂದ ರಾಜ್ಯವಾಳುತ್ತಿದ್ದ೧೦. ಈ ದಂಡನಾಯಕರ ವಂಶಿಕ ಕೇತಯ ದಂಡನಾಯಕನ ಆಳ್ವಿಕೆಗೆ (ಮೇದಾರ ಕೇತಯ್ಯನ ಹೆಸರಿನನ್ವಯ) ಕೇತಶರಧಿ-ಕೇತಸಮುದ್ರ-ಕ್ಯಾತ್ಸಂದ್ರವನ್ನೊಳಗೊಂಡ ಆನೆಬಿದ್ದಸಜೆ (ದೇವರಾಯನದುರ್ಗ ಶ್ರೇಣಿಪ್ರದೇಶ) ಸೇರಿತ್ತು. ಕ್ರಿ.ಶ.೧೩೪೦ನೆಯ, ಹೊಯ್ಸಳ ೩ನೆಯ ಬಲ್ಲಾಳನ ಕಾಲದ ಹರದನಹಳ್ಳಿ ಶಾಸನದಲ್ಲಿ*[೧೧] ಈ ಕೇತಯ್ಯ ದಂಡಯ್ಯ ನಾಯಕನ ಹಿರಿಯ ವಂಶಿಕ(ತಂದೆ) ಮಾಧವ


ಹರದನಹಳ್ಳಿಯ ಅಣಿಲೇಶ್ವರ (ದಿವ್ಯಲಿಂಗೇಶ್ವರ) ಲಿಂಗ

ದಂಡನಾಯಕನಿಗೆ ದಿವ್ಯಲಿಂಗ ಅಣಿಲೇಶ್ವರ ದೇವರಿದ್ದ ಹರದನಹಳ್ಳಿಯನ್ನು (ಮಗೆಯ, ಮಗ್ಗೈಯ ಎಂಬುದು ಅದರ ಹಿಂದಿನ ಸ್ಥಳನಾಮ, ಹರದರು ಅಡುಗೆಗೆ ಅರಿಯದೆ ಶಿವಲಿಂಗದ ರುದ್ರಭಾಗವನ್ನು ಒಲೆಕಲ್ಲಾಗಿ ಇಟ್ಟ ಐತಿಹ್ಯದ ಕಾರಣ ಶಾಪವಿಮೋಚನೆಯ ನಂತರ ಹೆಸರುಗೊಂಡ ಹರದನಹಳ್ಳಿ) 'ಜಂಮಸ್ತಳ'ವಾಗಿ (ಅಂದರೆ ಅರಸರಿಗೆ


ಹರದನಹಳ್ಳಿಯ ಗೋಸಲ ಸಿದ್ಧೇಶ್ವರ ಮಠ


ಮಠದ ಸ್ತಂಭದ ಇಷ್ಟಲಿಂಗಾನುಷ್ಠಾನ ಯತಿಯ ಶಿಲ್ಪ



ಕ್ಯಾತ್ಸಂದ್ರದ ಕೆರೆ (ಕೇತಶರಧಿ)ಯ ನೋಟಗಳು

ಸಲ್ಲಿಸಿದ ಸೇವೆಗಾಗಿ ಶಾಶ್ವತವಾಗಿ ಕೊಡುವ ವಂಶಿಕ ಜನ್ಮಸಿದ್ಧ ಹಕ್ಕಿನ ಭೂಮಿಯನ್ನು) ಕೊಟ್ಟ ಬಗ್ಗೆ ಹೇಳಿದೆ. ಹೀಗಾಗಿ ಹರದನಹಳ್ಳಿ ಹಾಗೂ ಕ್ಯಾತ್ಸಂದ್ರ ಸಿದ್ದಗಂಗಾಕ್ಷೇತ್ರಕ್ಕೆ ರಾಜಾಶ್ರಿಕೆ ಹಾಗೂ ಧರ್ಮೋಸಾಂಸ್ಕೃತಿಕ ಸಂಬಂಧ ಇತ್ತು ಎನ್ನಬೇಕು. ಕ್ರಿ.ಶ.೧೩೧೬-೧೭ರ ಹೊತ್ತಿಗೆ ಶಾಸನೋಕ್ತವಾಗಿ*[೧೦] ಹೊಯ್ಸಳ ಮಹಾಪ್ರಧಾನ ಮಾಧವ ದಂಡನಾಯಕನ ಕಾಲದಲ್ಲಿ ಹರದನಹಳ್ಳಿಯಲ್ಲಿ ಅಣಿಲೇಶ್ವರ ದೇಗುಲ ನಿರ್ಮಾಣವಾಗಿತ್ತು. ಮಾಧವ ದಂಡನಾಯಕರ 'ಮನೆಗೊಡು ವಂಣೆನಾಡ ಮರ್ಗ್ಯೆಯ' (ಮನೆತನಕ್ಕೆ ಕೊಟ್ಟ ಜಮ್ಮನಾಡು ಹರದನಹಳ್ಳಿಯಲ್ಲಿ ಆ ಹೊತ್ತಿಗೆ ಹರದರ ಅಡುಗೆಗೆ ಬಳಸಿದ ಲಿಂಗದ ಗುಂಡಿನ ಐತಿಹ್ಯ ನಡೆದು ಹೋಗಿ, ಅಣಿಲೇಶ್ವರ ದೇಗುಲ, ಸ್ಥಾಪನೆಗೊಂಡಿತ್ತು[೧೧]. ಇಂಥ ಹರದನಹಳ್ಳಿ ಪ್ರದೇಶಕ್ಕೆ ತುಮಕೂರು ಪ್ರದೇಶದ 'ಆನೆಬಿದ್ದಸಜೆ' ಕ್ಯಾತ್ಸಂದ್ರ-ಹರಳೂರು ಭಾಗಗಳನ್ನು ನಿರ್ವಹಿಸುತ್ತಿದ್ದ ಕೇತಯ್ಯ ದಂಡನಾಯಕ ಹೊಯ್ಸಳ ದೊರೆಯ ಆಣತಿಯಂತೆ (ಹೊಯ್ಸಳರಲ್ಲಿ ಇಂಥ ವರ್ಗಾವಣೆ ಪದ್ಧತಿ ಚಾಲ್ತಿಗಿತ್ತು.) ಸಾಗಿದ. ಅಲ್ಲದೆ ಹೊಯ್ಸಳರು ಆ ಪ್ರದೇಶದ ನಿರ್ವಹಣಾ ವ್ಯವಸ್ಥೆಗೆ ಕೇತಯ್ಯ ದಂಡನಾಯಕನನ್ನು ಸಜ್ಜುಗೊಳಿಸಿದಂತಿದೆ. ಗೋಸಲಾರ್ಯ ಯತಿಯ ತೀರ್ಥರೂಪರಾದ ಅಪ್ಪಣಾರ್ಯರು ಹೊಯ್ಸಳರ ರಾಜಗುರುಗಳಾಗಿ ಹರದನಹಳ್ಳಿ ಪ್ರದೇಶದಲ್ಲಿದ್ದವರು ಅಂತಾಗಿ, ರಾಜಗುರುವಂಶದ ಗೋಸಲಾರ್ಯ ಯತಿಗಳ ಧರ್ಮರಕ್ಷಣಾಕಾರ್ಯಕ್ಕೆ ಪೋಷಕವಾಗಿ ಕೇತಯ ದಂಡನಾಯಕನು ಭಕ್ತನಾಗಿ ಸಂಪರ್ಕ ಪಡೆದು ನೆರವಾದ ಸಂದರ್ಭವಾಗಿರಬೇಕು. ಆಗ ತ್ರಯಶರಣರ ಕ್ಷೇತ್ರವೂ ಆಗಿದ್ದ ಸಿದ್ಧಗಂಗೆಗೆ ಧಾವಿಸಲು ಬಿನ್ನವಿಸಿರಬೇಕು. ಆಗ ಹರದನಹಳ್ಳಿಯಿಂದ ಧರ್ಮಸಂರಕ್ಷಣಾ ಸಂಚಾರ ಹೊರಟು ಸಿದ್ದಗಂಗೆಗೆ ಬರುವ ಮುಂಚೆ ಬೆಳಗಿದ ಕ್ಷೇತ್ರಗಳನ್ನು ಗಮನಿಸಬೇಕು. ಹರದನಹಳ್ಳಿಯಲ್ಲಿ 'ಶ್ರೀ ಗೋಸಲಾರ್ಯರ ಪೀಠ'ವೂ (ಹರದನಹಳ್ಳಿಮಠ) ಇದು ಅವರ ತೋರುಗದ್ದುಗೆಯೂ ಹೌದು. ಆ ಗೋಸಲವಂಶಕ್ಕೆ ಸೇರಿದವರೆಂದು ಅಂಚವಾಗಿ-ಚನ್ನಾಪುರ ಆರಾಧ್ಯ ಮನೆತನದವರು ಅರ್ಚಕರಾಗಿ ಶ್ರೀ ಷಣ್ಮುಖರಾಧ್ಯರ ಹೇಳಿಕೆ ಇದೆ.

ಹರದನಹಳ್ಳಿಯಿಂದ ಸಿದ್ಧಗಂಗೆಗೆ ಬರುವ ಹಾದಿಯಲ್ಲಿ ಒಂದು ಗಮನಾರ್ಹ ಕ್ಷೇತ್ರವಾಗಿ ರಾಮನಗರ ಜಿಲ್ಲೆ ಚನ್ನಪಟ್ಟಣ ತಾ. ಸೋಗಾಲ ಗ್ರಾಮ ಕಾಣಬರುತ್ತದೆ. ಅಲ್ಲಿ ಪ್ರಾಚೀನ ಸೋಮೇಶ್ವರ ಲಿಂಗವೂ, ಬೆಳಗಾವಿ ಸೊಗಲ ಕ್ಷೇತ್ರಕ್ಕೆ ಸಂವಾದಿಯಂತಿದೆ. ಸಪ್ತಮಾತೃಕೆಯರ ಶಿಲ್ಪವೂ ಇಲ್ಲಿದೆ. ಅದನ್ನೆಲ್ಲ ಸ್ವಯಂಪ್ರಭಾಮುನಿ ಪ್ರತಿಷ್ಠಾಪಿದರು ಎಂಬ ಐತಿಹ್ಯವಿದ್ದು, ಸೊಗಲದ ಮುನಿವಳ್ಳಿಯ ಅಗಸ್ತ್ಯಮುನಿಯ ನೆನಪು ತರುತ್ತದೆ. ಈ ಪ್ರದೇಶದ ರಾಜನೊಬ್ಬನಿಗೆ ಅನ್ಯಗ್ರಾಹ್ಯವಾಗುವಲ್ಲಿ ಹುಳು ಬೀಳುತ್ತಿತ್ತಂತೆ, ಅದನ್ನು ತಪ್ಪಿಸಲು ರಾಜನಿಗೆ ಔಷಧೋಪಚಾರವಲ್ಲದೆ ಊರನ್ನು ಸ್ವಚ್ಛಗೊಳಿಸುವ ಕಾಯಕ ಮಾಡಿದರಂತೆ. ಇದರ ನೆನಪಿಗೇನೋ ಎಂಬಂತೆ ಸೋಗಾಲ ಗ್ರಾಮದ ಗಡಿಯಲ್ಲಿ ಜಟಾಮುನೀಶ್ವರ ಗುಡಿಯೂ ಇದೆಗಳ. ಅಂದರೆ ಗೋಸಲಾರ್ಯರು ಇಲ್ಲಿ ಬರುವಲ್ಲಿ ತಮ್ಮ ದೀಕ್ಷಾಗುರುಗಳಿದ್ದ ಸೊಗಲಕ್ಷೇತ್ರದ ದೈವಿಕ ಪರಿಸರವನ್ನು ನಿರ್ಮಿಸಿ, ಊರಿಗೂ ಸೋಗಾಲ ಎಂಬ ಹೆಸರಿಟ್ಟು ಸಾಗಿದರು ಎಂಬ ಐತಿಹ್ಯಕ್ಕೆ ಪೂರಕವೆಂಬಂತೆ ಈ ಸೋಗಾಲದ ಪರಿಸರ ಇದೆ. ಆ ನಂತರ ಐತಿಹ್ಯಕ್ಕೆ ಪೂರಕವಾಗಿ ಕಾಣಿಸುವ ಕ್ಷೇತ್ರ, ಪಂಚಲಿಂಗೇಶ್ವರ(ಕೊಂಗುಮಲ್ಲೇಶ್ವರ) ಇರುವ ಸಿಂಗ್ರೀಹಳ್ಳಿ ಎನಿಸುತ್ತದೆ.

*(ಮುಂದುವರೆಯುತ್ತದೆ)*

೮. ಪಂ. ಚನ್ನಪ್ಪ ಎರೆಸೀಮೆ, 'ಗೋಸಲ ಪರಂಪರೆಯ ಬೆಳಗು' ದಾಸೋಹಪುರಿ, ಅದೇ, ಪು. ೨೪೬

೮ಅ. ಪಂ. ಚನ್ನಪ್ಪ ಎರೆಸೀಮೆ, ೨೦೦೮, ನಿರಂಜನ ಜಂಗಮ ವಂಶ ಮತ್ತು ತೋಂಟದ ಸಿದ್ಧಲಿಂಗೇಶ್ವರರು, ಶ್ರೀ ಸಿದ್ಧಗಂಗಾ ಪ್ರಕಾಶನ, ಶ್ರೀ ಸಿದ್ಧಗಂಗಾ ಮಠ

೯. ಎ.ಕ. ಸಂ.೩, ಗುಂ.ಪೇ.೪೦, ರಾಘವಾಪುರ, ಕ್ರಿ.ಶ.೧೩೨೦, ಮೈ.ವಿ.ವಿ.

೧೦. ಎ.ಕ. ಸಂ.೩. ನಂ.ಗೂ. ಕ್ರಿ.ಶ.೧೩೩೨ರ ಶಾಸನ, ಹುಲ್ಲಹಳ್ಳಿ

೧೧. ಎ.ಕ. ಸಂ.೩, ಚಾ.ನ. ೨೭೫-೭೮, ಕ್ರಿ.ಶ.೧೩೪೦, ಹರದನಹಳ್ಳಿ







# ಭಯೋತ್ಪಾದನೆ

– ಡಾ. ಗೊ.ರು. ಚನ್ನಬಸಪ್ಪ*

ಇದು ಸುದ್ದಿ ಮಾಧ್ಯಮಗಳ ಕಾಲ. ಮದ್ದು ಗುಂಡುಗಳ ಜಾಲ. ಪತ್ರಿಕೆ ತೆರೆದರೆ, ಟಿ.ವಿ. ನೋಡಿದರೆ, ರೇಡಿಯೋ ಕೇಳಿದರೆ ಅದೇ ಸುದ್ದಿ, ಅದೇ ದೃಶ್ಯ. ಯುದ್ಧ ವಿಮಾನಗಳ ಹಾರಾಟ, ಬಾಂಬುಗಳ ಬೀರಾಟ, ಹೊಗೆ ಬೆಂಕಿಯ ನೋಟ, ಸಾವು ನೋವುಗಳ ಚೀರಾಟ. ಜಗತ್ತೇ ತಲ್ಲಣಗೊಂಡಿದೆ. ಈಗಿನ ಮನೆಮಾತು ತಾಲಿಬಾನ್, ಬಿನ್ ಲಾಡೆನ್, ಅಫ್ಘಾನಿಸ್ತಾನ್, ಪಾಕಿಸ್ತಾನ. ಈ ಪ್ರಕ್ಷುಬ್ಧ ಪರಿಸ್ಥಿತಿಗೆ ಮೂಲಕಾರಣ ಭಯೋತ್ಪಾದನೆ, ಉಗ್ರಗಾಮಿಗಳ ಉದ್ಧಟತನ.

ಭಯೋತ್ಪಾದನೆ ಇದ್ದಕ್ಕಿದ್ದಂತೆ ಎದ್ದು ಬಂದ ಭೂತವಲ್ಲ. ಕೆಲವು ರಾಷ್ಟ್ರಗಳು ಹುಟ್ಟುಹಾಕಿ ಬಿಟ್ಟು ಬೆಳೆಸಿದ ಕಿರಾತಶಕ್ತಿ. ಭಯಾನಕ ವಿಷವೃಕ್ಷ. ಹಿಡಿ ಕ್ರೂರಿಗಳು ಬಿತ್ತಿಬೆಳೆದ ಈ ವಿಷವೃಕ್ಷದ ಫಲವನ್ನು ಇಡೀ ವಿಶ್ವವೇ ಉಣ್ಣಬೇಕಾಗಿದೆ. ಈ ದುಷ್ಟಶಕ್ತಿ ಈಗ ವಿಶ್ವದೆಲ್ಲೆಡೆ ಹಬ್ಬಿಕೊಂಡಿದೆ. ಭಯೋತ್ಪಾದನೆಯ ಬಗೆಗೆ ಜಾಗತಿಕ ಜಾಗೃತಿ ಅಗತ್ಯವೆಂದು ಭಾರತ ಹೇಳುತ್ತಲೇ ಬಂದರೂ ಯಾರೂ ಅದನ್ನು ಗಂಭೀರವಾಗಿ ಪರಿಗಣಿಸಿರಲಿಲ್ಲ. ಆದರೆ ವಿಶ್ವದ ಶ್ರೀಮಂತ ರಾಷ್ಟ್ರವೆನಿಸಿರುವ ಅಮೇರಿಕಾಕ್ಕೆ ಈ ಭೂತ ಬಂದು ಅಪ್ಪಳಿಸಿದ ಮೇಲೆ ಈಗ ಎಲ್ಲೆಲ್ಲೂ ಅದೇ ಮಾತು.

ಇಂದು ಉಂಟಾಗಿರುವ ಜಾಗತಿಕ ತಲ್ಲಣಕ್ಕೆ ಮೂಲ ಕಾರಣ ಭಯೋತ್ಪಾದನೆ ಎಂಬಲ್ಲಿ ಸಂಶಯವಿಲ್ಲ. ಆದರೆ ಈ ಭಯೋತ್ಪಾದನೆಗೂ ಒಂದು ಮೂಲವಿರಬೇಕಲ್ಲ. 'out look' ಪತ್ರಿಕೆಯ ಸಂಚಿಕೆಯಲ್ಲಿ ಪ್ರಸಿದ್ಧ ಅಂಕಣಕಾರ್ತಿ ಅನಿತಾ ಪ್ರತಾಪ್ 'The cresent of lunacy' (ಮತಿಭ್ರಮಣೆಯ ಅಧಿಪತ್ಯ) ಎಂಬ ಶೀರ್ಷಿಕೆಯಲ್ಲಿ ತುಂಬ ಗಂಭೀರವಾದ ವಿಶ್ಲೇಷಣೆ ನಡೆಸಿದ್ದಾರೆ. ಭಯೋತ್ಪಾದನೆಯ ಕಾರಣ ಮತ್ತು ಪ್ರೇರಣೆಯತ್ತ ನಮ್ಮ ಗಮನ ಸೆಳೆದಿದ್ದಾರೆ.

ಭಯೋತ್ಪಾದನೆ ಚಿಗುರೊಡೆದು ಒಗರಾಗಲು ಉಗಮ ಸ್ಥಾನವೆಂದರೆ ಜನರ ಮೂಲಭೂತ ಅಗತ್ಯಗಳ ಪೂರೈಕೆಯಲ್ಲಿ ಆಡಳಿತವು ನಡೆಸುವ ಪಕ್ಷಪಾತ. ವಾಸ್ತವವಾಗಿ ಅವರ ಬೇಡಿಕೆ ನ್ಯಾಯಯುತವಾಗಿದ್ದರೂ, ಆ ಬಗೆಗೆ ಅಧಿಕಾರಸ್ಥರು ತಾಳುವ ನಿರ್ಲಕ್ಷ್ಯಭಾವ. ಅಂತಹ ಸಂದರ್ಭದಲ್ಲಿ ಅವಜ್ಞೆಗೆ ಒಳಗಾದ ವ್ಯಕ್ತಿ ಅಥವಾ ಗುಂಪಿನಲ್ಲಿ ಸಹಜವಾಗಿ ಅಸಂತುಷ್ಟಿಯ ಹೊಗೆಯಾಡುತ್ತದೆ. ಆ ಮನಃಕ್ಷೋಭೆಯ ಒತ್ತಡ ಕುದಿಯಾಗುತ್ತದೆ; ಭುಗಿಲೇಳುತ್ತದೆ.

ಆಡಳಿತದ ದಂಡದಡಿ ಅಸಂತುಷ್ಟ ವರ್ಗಕ್ಕೆ ಅಭದ್ರತೆಯ ಅನುಭವವಾಗುತ್ತದೆ. ಹತಾಶೆ ಅನಿವಾರ್ಯ ವಾಗುತ್ತದೆ. ಆ ವರ್ಗ ಉದ್ವೇಗಕ್ಕೆ ಒಳಗಾಗುತ್ತದೆ. ನಿಗ್ರಹ ಶಕ್ತಿಯ ವಿರುದ್ಧ ಉಗ್ರವಾಗುತ್ತಲೇ ಹೋಗುತ್ತದೆ. ಆ ವರ್ಗದ ಜನರಲ್ಲಿ ತಮಗೆ ಅನ್ಯಾಯವಾಗುತ್ತಿದೆ, ತಾವು ಅನಿಶ್ಚಿತ ಸ್ಥಿತಿಯಲ್ಲಿದ್ದೇವೆ, ತಮ್ಮನ್ನು ತುಳಿಯಲಾಗುತ್ತಿದೆ ಎಂಬ ಅರಿವು ಹೆಚ್ಚಾದಂತೆಲ್ಲ ಅವರು ಎಲ್ಲೆಂದರಲ್ಲಿ ಅಡಗುತ್ತಾರೆ, ವಿಧ್ವಂಸಕ ಚಟುವಟಿಕೆಗಳಲ್ಲಿ ತೊಡಗುತ್ತಾರೆ. ಆ ಹಂತದಲ್ಲಿ ಆಡಳಿತದ ದಮನ ಕಾರ್ಯ ಹೆಚ್ಚಿದಂತೆಲ್ಲ ಅವರ ಹಿಂಸಾತ್ಮಕ ಕಾರ್ಯಗಳು ಸ್ಫೋಟಗೊಳ್ಳುವುದೂ ಹೆಚ್ಚಾಗುತ್ತದೆ. ಇದಕ್ಕೆ ಅಂಕಣಕಾರ್ತಿ ಶ್ರೀಲಂಕಾ, ಉತ್ತರ ಐರ್ಲೆಂಡ್, ದಕ್ಷಿಣ ಆಫ್ರಿಕಾ, ಈಜಿಪ್ಟ್ ಮೊದಲಾದ ರಾಷ್ಟ್ರಗಳನ್ನು ಉದಾಹರಿಸಿದ್ದಾರೆ.

ಅಲ್ಲೆಲ್ಲ ಆಗಿರುವುದು ಹೀಗೆಯೇ. ಆಶಾಭಂಗವಾದ ವರ್ಗ ಮೊದಲು ತನ್ನ ಅಸಮಾಧಾನವನ್ನು ಕೋಪದ ರೂಪದಲ್ಲಿ ವ್ಯಕ್ತಪಡಿಸುತ್ತದೆ. ಅಥವಾ ಚುನಾವಣೆ ಸಂದರ್ಭದಲ್ಲಿ ಆಡಳಿತ ಪಕ್ಷದ ವಿರುದ್ಧ ಮತ ನೀಡಿ ತನ್ನ ದ್ವೇಷವನ್ನು ತೀರಿಸಿಕೊಳ್ಳುತ್ತದೆ. ಇದನ್ನು ಆಡಳಿತವರ್ಗ ಭಯೋತ್ಪಾದನೆಯ ಮುನ್ಸೂಚನೆ ಎಂದು ಭಾವಿಸುವುದಿಲ್ಲ. ಅಧಿಕಾರದ ಅಮಲಿನಲ್ಲಿ ಅಂತಹ ವಿರುದ್ಧ ಶಕ್ತಿಗಳನ್ನು ಹತ್ತಿಕ್ಕಲು ಪ್ರಯತ್ನಿಸುತ್ತದೆ. ಯಾವಾಗ ತಮ್ಮ ದೂರು ಸಂಕಟಗಳಿಗೆ ಅಧಿಕಾರ ಕಿವುಡಾಗಿ, ತಮ್ಮ ಹೋರಾಟವನ್ನು ಹತ್ತಿಕ್ಕಲೆತ್ನಿಸುತ್ತದೋ ಆವಾಗ ಆ ವರ್ಗ ಭಿನ್ನ ದಾರಿಯನ್ನು ಹಿಡಿಯುತ್ತದೆ. ಆಡಳಿತ ವರ್ಗದಲ್ಲಿ ಸ್ವಾರ್ಥ ಹಿತಾಸಕ್ತಿ ಮತ್ತು ಭ್ರಷ್ಟತೆಗಳಿದ್ದರಂತೂ ಈ ಪ್ರತಿರೋಧ ಶಕ್ತಿಗಳು ಸಿಡಿಮದ್ದಾಗಿಬಿಡುತ್ತವೆ.

* ಗೌರವ ಸಲಹೆಗಾರರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ೪೦೬, ಪ್ರಣಾಮ, ೩ನೇ ಕ್ರಾಸ್, 'ಎಫ್' ರಸ್ತೆ, ಐಡಿಯಲ್ ಹೋಮ್ಸ್ ಟೌನ್‌ಶಿಪ್, ೨ನೇ ಹಂತ, ರಾಜರಾಜೇಶ್ವರಿನಗರ, ಬೆಂಗಳೂರು-೫೬೦ ೦೯೮

ವಾಸ್ತವವಾಗಿ, ಈ ಉಗ್ರಗಾಮಿಗಳು ಹುಟ್ಟು ಕೊಂಡುದೇ ಸರ್ವಾಧಿಕಾರ ಪ್ರಭುತ್ವದ ಸರ್ಪದ ಹೆಡೆಯ ನೆರಳಿನಲ್ಲೇ ಎನ್ನುವುದನ್ನು ಅಂಕಣಕಾರ್ತಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಕೆಲವು ಕಡೆ ದುರ್ಬಲ ಸರ್ಕಾರಗಳೂ ಕಾರಣವಾಗುತ್ತವೆಂದು ಹೇಳಿದ್ದಾರೆ. ದುರಾದೃಷ್ಟದ ಸಂಗತಿಯೆಂದರೆ, ಇಪ್ಪತ್ತನೆಯ ಶತಮಾನದಲ್ಲಿ ಬಹುತೇಕ ಇಸ್ಲಾಂ ರಾಷ್ಟ್ರಗಳು ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಕಳೆದುಕೊಂಡು ಸರ್ವಾಧಿಕಾರ ಪ್ರಭುತ್ವಕ್ಕೆ ಒಳಗಾದುದು. ಅಲ್ಲಿನ ನಿಷ್ಕರುಣ ಹಾಗೂ ಭ್ರಷ್ಟ ಆಡಳಿತದಿಂದ ಹತಾಶರಾದ ಮುಸ್ಲಿಮರು ತಮ್ಮ ರಕ್ಷಣೆಗಾಗಿ ಧರ್ಮಕ್ಕೆ ತೆಕ್ಕೆ ಬಿದ್ದರು. ಪಶ್ಚಿಮ ಏಷ್ಯಾದಿಂದ ಇಂಡೋನೇಷ್ಯಾದವರೆಗೆ ಇಡೀ ಇಸ್ಲಾಮೀ ಆಧಿಪತ್ಯ ಧರ್ಮ ನಿಷ್ಠೆಗೆ ತಿರುಗಲು ಇದೇ ಕಾರಣ. ಅಲ್ಲಿನ ಸರ್ವಾಧಿಕಾರಿ ಆಡಳಿತಗಳು ರಾಜಕೀಯ ಪ್ರತಿರೋಧಗಳನ್ನು ನಾಮಾವಶೇಷ ಮಾಡಿದಾಗ ಜನ ಸಮುದಾಯ ಮಸೀದಿಗಳತ್ತ ತಿರುಗಿತು.

ಹೀಗೆ ಅನೇಕ ಮುಸ್ಲಿಂ ರಾಷ್ಟ್ರಗಳಲ್ಲಿ ಜನ ಸಮುದಾಯದ ಸ್ಥಿತಿಗತಿಗಳ ಬಗೆಗೆ ಆಡಳಿತ ವರ್ಗದ ಗಣ್ಯರು ತೋರಿದ ನಿರ್ಲಕ್ಷ್ಯತೆ, ಹೆಚ್ಚುತ್ತಿದ್ದ ಜನಸಂಖ್ಯೆ ಮತ್ತು ಬಡತನ, ಅಧಿಕಾರಿಗಳ ಪಕ್ಷಪಾತ ಮತ್ತು ಭ್ರಷ್ಟಾಚಾರ ಇವೆಲ್ಲ ಭಯೋತ್ಪಾದನೆಯ ಬೀಜಕ್ಕೆ ಬೇರಾದವು, ನೀರುಗೊಬ್ಬರ ವಾದವು. ಉಗ್ರಗಾಮಿ ಶಕ್ತಿಗಳು ಹತಾಶ ಸಮುದಾಯದಲ್ಲಿ ಧರ್ಮಾಂಧತೆಯ ವಿಷಬೀಜವನ್ನು ಬಿತ್ತಿದವು. ಮಸೀದಿ ಅವರಿಗೆ ಒಂದು ಕಾವಲು ಗೋಪುರವಾಯಿತು. ಅದುಮಿಟ್ಟಿದ್ದ ಹತಾಶೆಗಳ ಬಿಡುಗಡೆಗೆ ಹೊರವರ್ಗವಾಯಿತು. ಇಸ್ಲಾಂ ಧರ್ಮವನ್ನು ಹಿಂಸಾತ್ಮಕಗೊಳಿಸಿದರು, ಅಪ್ರಜಾಸತ್ತಾತ್ಮಕ ಗೊಳಿಸಿದರು. ಈ ಮತಿಭ್ರಮಣೆ ಈಗ ಲೋಕಜೀವನದ ಮುಖ್ಯ ವಾಹಿನಿಯನ್ನೇ ಪ್ರವೇಶಿಸಿಬಿಟ್ಟಿದೆ.

ಕ್ರಿಶ್ಚಿಯನ್ ಮತ್ತು ಹಿಂದೂ ರಾಷ್ಟ್ರಗಳಲ್ಲೂ ಕೆಲವರು ತಮ್ಮ ರಾಜಕೀಯ ಉದ್ದೇಶಗಳಿಗಾಗಿ ಧರ್ಮವನ್ನು ಹಾಗೆ ಮತಭ್ರಷ್ಟಗೊಳಿಸಿ, ಅವರ ಧರ್ಮಗಳಿಗೆ ಕಳಂಕ ತಂದವಿಲ್ಲವೆಂದಲ್ಲ. ಆದರೆ ಉಗ್ರಗಾಮಿ ಕೃತ್ಯಗಳು ಅಲ್ಲಿ ಹುಟ್ಟಿಕೊಳ್ಳಲು ಹೆಚ್ಚು ಅವಕಾಶವಾಗಲಿಲ್ಲ. ಇದಕ್ಕೆ ಕಾರಣ ಅಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಭದ್ರವಾಗಿ ನೆಲೆಗೊಂಡಿರುವುದು. ಅಭಿವೃದ್ಧಿಯ ಪ್ರಯೋಜನವನ್ನು ಎಲ್ಲರೂ ಹಂಚಿಕೊಳ್ಳಲು ಅವಕಾಶವಿರುವುದು. ಆದರೆ ಇಸ್ಲಾಂ ರಾಷ್ಟ್ರಗಳ ಪಾಡೇ ಬೇರೆ. ಉಲ್ಬಣಗೊಳ್ಳುತ್ತಿರುವ ಅಲ್ಲಿನ ಜನಸಂಖ್ಯೆ, ಸರ್ವಾಧಿಕಾರದ ಬೀಭತ್ಸತೆ, ತೀವ್ರ ಮತಾಂಧತೆ - ಇವುಗಳಿಂದಾಗಿ ಜನ ಸಾಮಾನ್ಯರ ಸ್ಥಿತಿಗತಿಗಳು ನಿಕೃಷ್ಟಗೊಂಡಿವೆ. ಅವರು ವಿವೇಕವನ್ನೇ ಕಳೆದುಕೊಂಡಿದ್ದಾರೆ.

ಮೊಟ್ಟಮೊದಲು ಈ ಇಸ್ಲಾಮಿ ಕಷ್ಟ ಕಾರ್ಪಣ್ಯಗಳು ಆಯಾ ರಾಷ್ಟ್ರಗಳಲ್ಲೇ ಇದ್ದವು. ಆದರೆ ಅವನ್ನು ಉಲ್ಬಣಿಸಿದವರು ಪಶ್ಚಿಮ ರಾಷ್ಟ್ರಗಳ ಧುರೀಣರು; ಅದರಲ್ಲೂ ಅಮೇರಿಕಾದವರೇ. ತಮ್ಮ ತೈಲ ಹಿತಾಸಕ್ತಿಗಳಿಗಾಗಿ ಅಮೇರಿಕಾ ಎಷ್ಟೋ ಭ್ರಷ್ಟ ಇಸ್ಲಾಮಿ ಆಡಳಿತಗಳನ್ನು ಬೆಂಬಲಿಸಿತು. ಮತ್ತೊಂದು ಕಡೆ ಪ್ಯಾಲಿಸ್ಟೈನಿನಲ್ಲಿ ಇಸ್ರೇಲಿನ ತುಳಿತವನ್ನು ಬೆಂಬಲಿಸಿತು. ಈ ನೀತಿಯಿಂದಾಗಿ ಆ ರಾಷ್ಟ್ರಗಳಲ್ಲಿ ಅನುಭವಿಸಿದ ಕಷ್ಟಕಾರ್ಪಣ್ಯಗಳಿಂದ ಅತೃಪ್ತರಾದ ಮುಸ್ಲಿಮರು ಅಮೇರಿಕಾವನ್ನು ತಮ್ಮ ದ್ವೇಷದ ಗುರಿಯಾಗಿಟ್ಟುಕೊಂಡರು. ದ್ವೇಷದ ದಳ್ಳುರಿಯಲ್ಲಿರುವವರಿಗೆ ವಿವೇಕವಿರಲು ಸಾಧ್ಯವಿಲ್ಲ. ಅಂತೆಯೇ ಅವರು ಅಕಾರಣವಾಗಿ ಭಾರತದ ಮೇಲೂ ಕಿಡಿಕಾರುತ್ತಿದ್ದಾರೆ. ಕಾಶ್ಮೀರದಲ್ಲಂತೂ ಜನಾಂಗೀಯ ಭೇದದ ಬೆಂಕಿ ಹಚ್ಚಿ ಅಮಾಯಕರ ಹತ್ಯೆಯ ಕೇಕೆ ನಡೆಸಿದ್ದಾರೆ. ಇವತ್ತು ಭಯೋತ್ಪಾದಕರನ್ನು ಸ್ವಾತಂತ್ರ್ಯ ಹೋರಾಟಗಾರರೆಂದು ಕರೆಯುವ ಪಾಕಿಸ್ತಾನದ ಪಾತ್ರವಂತೂ ನೀತಿಹೀನ.

ಈಗ ಇಡೀ ವಿಶ್ವ ಒಟ್ಟುಗೂಡಿ ಈ ಭಯೋತ್ಪಾದನೆಯ ಬೆಂಕಿ ಆರಿಸಬೇಕಾಗಿದೆ. ಹತ್ತಿರುವ ಕಡೆಗಳಲ್ಲಿ ಅದನ್ನು ಬೇಗ ಆರಿಸದಿದ್ದರೆ ಉಳಿದೆಲ್ಲ ಕಡೆಗೂ ಅದು ಹಬ್ಬಿ ಈ ಜಗತ್ತು ಕೇವಲ ಕಿರಾತಶಕ್ತಿಗಳ ಕ್ರೀಡಾಂಗಣವಾಗುತ್ತದೆ.

### ಶ್ರೀವಾಣಿ

ಮನುಷ್ಯ ನಿಜವಾದ ಮಾನವ ಧರ್ಮವನ್ನು ಪರಿಪಾಲನೆ ಮಾಡುವ ಪ್ರಜ್ಞೆವುಳ್ಳವನಾದಾಗ ಧರ್ಮ ಪರಿಪಾಲನೆ ಮಾಡಿದಾಗ ಜಗತ್ತಿನ ಕಲ್ಯಾಣವಾಗುತ್ತದೆ. ಶಾಂತಿದಾಯಕವಾದ ವಾತಾವರಣ ಉಂಟಾಗುತ್ತದೆ. ಧರ್ಮದ ಉಲ್ಲಂಘನೆಯಾದಾಗ, ಜಗತ್ತಿನಲ್ಲಿ ಆಲ್ಲೋಲ ಕಲ್ಲೋಲವಾಗುತ್ತದೆ. ಇವತ್ತು ಕಾಣುವಂತಹ ಚಿತ್ರಕ್ಕೆ ಮೂಲಭೂತವಾದಂತಹ ಕಾರಣ ಧರ್ಮದ ಬಗ್ಗೆ ಅಜ್ಞಾನವಿರುವುದಾಗಿದೆ. ಧರ್ಮಪರಿಪಾಲನೆ ಮಾಡದೇ ಇರುವಂತಹ ಪ್ರವೃತ್ತಿ ಎಲ್ಲಾ ಕಡೆ ತಾಂಡವಾಡುತ್ತಿದೆ.





# ಪರಮ ದಾಸೋಹದ ಪ್ರತಿರೂಪ ಡಾ. ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳು

- ಬಿ.ಎಂ. ಪರಮೇಶ್ವರಪ್ಪ *

ಮಧ್ಯರಾತ್ರಿ ಮೀರಿದೆ, ಎಲ್ಲಿ ನೋಡಿದರು ಮೌನ, ಎಲ್ಲರೂ ಆಳವಾದ ಗಾಢ ನಿದ್ರೆಯಲ್ಲಿದ್ದಾರೆ. ತಂಪಾದ ಗಾಳಿ ಬೀಸುತ್ತಿದೆ, ಸೂಜಿ ಬಿದ್ದರು ಕೇಳಿಸುವಷ್ಟು ನಿಶಬ್ಧ. ಬೆಳಗಿನ ೨-೩೦ರ ಸಮಯ, ನಿದ್ರೆಯಿಂದ ಎಚ್ಚರಗೊಳ್ಳುತ್ತಿದೆ ಒಂದು ಜೀವ, ಮತ್ತೆ ನಿದ್ರೆಗೆ ಹೋಗುವುದೇ ರಾತ್ರಿ ೧೧ ಗಂಟೆಗೆ. ಈ ದಿನಚರಿ ೮೫ ವರ್ಷಗಳಿಂದಲೂ ತಪ್ಪದೆ ನಡೆದು ಬಂದಿದೆ. ತನ್ನ ಒಂದು ಒಡಲ ತುಂಬಿಸಲು ದಿನಕ್ಕೆ ೨೦ ಗಂಟೆಗಳ ದೀರ್ಘ ದುಡಿಮೆ ಅವಶ್ಯಕವೆ ಎಂಬ ಪ್ರಶ್ನೆ. ಅಲ್ಲ. ಸಹಸ್ರಾರು ವಿದ್ಯಾರ್ಥಿಗಳ ಒಡಲ ತುಂಬಿ, ನೆತ್ತಿಯ ಹಸಿವ ನಂದಿಸಿ, ಸಂಸ್ಕಾರ ಕೊಟ್ಟು ನಾಡಿಗೆ ಸತ್‌ಪ್ರಜೆಗಳನ್ನು ನೀಡುವ ಸದುದ್ದೇಶ. ಎಂತಹ ಉದಾತ್ತ ಜೀವನ. ೧೧೦ನೇ ವರ್ಷಕ್ಕೆ ಪಾದಾರ್ಪಣೆ, ದಣಿವರಿಯದ ಕಾಯಕ, ದೇಹ ಬಾಗಿದೆ, ಮುಪ್ಪು ಬಂದಿದೆ, ಅದು ದೇಹ ಧರ್ಮ, ವಯೋ ಧರ್ಮ, ಸೃಷ್ಟಿ ನಿಯಮ. ಆದಾಗ್ಯೂ ಅದನ್ನು ಮೀರಿದ ಚೈತನ್ಯದ ಚಿಲುಮೆ, ದೇಹದಲ್ಲಿ ಕಾಣುತ್ತಿದೆ. ಮುಪ್ಪು ಬರುವುದು ನರಳುವುದಕ್ಕಲ್ಲ ಸಾಧಿಸಲಿಕ್ಕೆಂಬುದನ್ನು ಸಾಧಿಸಿ ತೋರಿಸಿದ್ದಾರೆ. ತ್ರಿಕರಣ ಶುದ್ಧಿಯಿಂದ ಕಾವಿಗೆ ಗೌರವ ತಂದು ಕೊಟ್ಟಿದ್ದಾರೆ. ಮಠಾಧಿಪತಿಗಳಿಗೆ ಮಾರ್ಗದರ್ಶ ಕರಾಗಿ ಆದರ್ಶಪ್ರಾಯರಾಗಿದ್ದಾರೆ. ಕಾಯಕ ದಾಸೋಹದ ಪ್ರತಿರೂಪವಾಗಿದ್ದಾರೆ. ಬಸವಾದಿ ಶರಣರ ವಚನಗಂಗೆಯಲ್ಲಿ ಜನರು ಮಿಂದು ಮಡಿಯಾಗಲೆಂದು, ಆ ಅಮೃತಮಯ ಸಂದೇಶವನ್ನು ತಲೆಯ ಮೇಲೆ ಹೊತ್ತುಕೊಂಡು ನಾಡಿನುದ್ದಗಲಕ್ಕೂ ತಿರುಗುವ ಮಹಾಮಣಿಹದಲ್ಲಿ ಮಗ್ನರಾಗಿದ್ದಾರೆ. ಒಂದು ಜೀವನ ಇಷ್ಟು ಸಾಧಿಸಲು ಸಾಧ್ಯವೆ ಎನ್ನುವ ವಿಸ್ಮಯಕ್ಕೆ ಕಾರಣರಾಗಿದ್ದಾರೆ. ೨೦-೨೧ನೇ ಶತಮಾನದ ಅದ್ಭುತವೆನಿಸಿದ್ದಾರೆ. ಅವರೇ ನಾಡು ಕಂಡ ಅಪರೂಪದ ಸಿದ್ಧಗಂಗಾ ಮಠದ ಪರಮಪೂಜ್ಯ ಶ್ರೀ ಶಿವಕುಮಾರ ಶಿವಯೋಗಿಗಳು.

**ಅಚ್ಚರಿಯ ದಿನಚರಿ :**

ದಿನಚರಿ ಬೆಳಗು ೨-೩೦ಕ್ಕೆ ಪ್ರಾರಂಭ. ಏಳುತ್ತಲೆ ಸ್ವಲ್ಪಕಾಲ ಗ್ರಂಥಗಳ ಅಧ್ಯಯನ, ನಂತರ ನಾಲಿಗೆಯ ಮೇಲೆ ರಾಗವಾಗಿ ಹೇಳುವ ಶರಣರ, ಶಿವಯೋಗಿಗಳ ಸೂಳ್ನುಡಿಗಳು, ಅದಕ್ಕೆ ತಕ್ಕಂತೆ ತಾಳಬದ್ಧವಾದ ಪಾದರಕ್ಷೆಗಳ ಪಟಪಟನೆಯ ಶಬ್ಧದೊಂದಿಗೆ ಸ್ನಾನದ ಕೊಠಡಿ ಪ್ರವೇಶ. ನಂತರ ಪೂಜಾಗೃಹಕ್ಕೆ ೩ ಗಂಟೆಗಳ ಕಾಲ ಪೂಜೆ, ಜಪತಪ ಅನುಷ್ಠಾನ, ಈ ಶಕ್ತಿಯ ಮುಂದೆ ಬೇರೆ ಎಲ್ಲಾ ಶಕ್ತಿಗಳು ಗೌಣ ಎಂಬ ಪೂಜ್ಯರ ಗೌರವದ ನುಡಿಗಳು. ಪೂಜೆಯು ಕಾಯಕದ ಒಂದು ಅಂಗ ಎನ್ನುವುದು ಪೂಜ್ಯರ ಅಚಲ ನಿಲುವು. ಇದು ೧೨ನೇ ಶತಮಾನದ ಬಸವಾದಿ ಶರಣರ ಸಂದೇಶವು ಹೌದು. ಬೆಳಗು ೬ಕ್ಕೆ ಕಛೇರಿಗೆ ರಾತ್ರಿ ೧೧ ಕ್ಕೆ ನಿದ್ರೆ ಹೋಗುವವರೆಗೆ ಬಿಡುವಿಲ್ಲದ ಕಾರ್ಯಗಳಲ್ಲಿ ಮಗ್ನ. ಇದು ೮೫ ವರ್ಷಗಳಿಂದಲೂ ಪಾಲಿಸುತ್ತ ಬಂದಿರುವ ಅದ್ಭುತ ದಿನಚರಿ. ಇದು ಅಚ್ಚರಿಯಲ್ಲವೇ ?

**ಕಾಯಕ ಯೋಗಿ :**

ಮನುಷ್ಯ ಕಾಯಕ ಜೀವಿಯಾಗಿ ಜೀವನ ಸಾಗಿಸುವುದು ಅವಶ್ಯ. ಸ್ವಾತಂತ್ರ್ಯ ಬಂದಾಗ ೩೩ ಕೋಟಿ ಜನ ಸಂಖ್ಯೆ, ೭೦ ವರ್ಷ ಕಳೆದಿದೆ, ಈಗ ೧೨೫ ಕೋಟಿ ಜನ ೨೫೦ ಕೋಟಿ ಕೈಗಳು ಮನಸ್ಸು ಮಾಡಿದರೆ ಜಗತ್ತು ವಿಸ್ಮಯಗೊಳ್ಳುವುದನ್ನು ಸಾಧಿಸಬಹುದು. ಆದರೆ ಬಡತನ ತೊಲಗಿಲ್ಲ. ಕಾರಣ ಈ ಕೈಗಳಲ್ಲಿ ಶಕ್ತಿ ಕುಂದಿದೆ, ಕೈಗಳು ನಿಸ್ತೇಜವಾಗಿವೆ, ಅಶಕ್ತವಾಗಿವೆ, ಇದೊಂದು ಬಿಡಿಸಲಾಗದ ಸಂಗತಿಯೆಂದು ತಿಳಿದವರು ಬಹುತೇಕ ಜನ. ಇದು ತಪ್ಪುಗ್ರಹಿಕೆ ಎಂದು ಮನವರಿಕೆಯಾಗುತ್ತದೆ. ಶ್ರೀ ಸಿದ್ಧಗಂಗಾ ಕ್ಷೇತ್ರ ದರ್ಶನ ಮಾಡಿದವರಿಗೆ, ಎರಡು ಕೈಗಳು ಏನೆಲ್ಲ ಸಾಧಿಸಬಹುದೆಂಬುದನ್ನು ಸಾಧಿಸಿ ತೋರಿಸಿದ್ದಾರೆ ಸಿದ್ಧಿಪುರುಷರಾದ ಸಿದ್ಧಗಂಗಾ ಶ್ರೀಗಳು. ೧೯೪೧ರಲ್ಲಿ ಇವರ ಗುರುಗಳಾದ ಪೂಜ್ಯ ಉದ್ದಾನ

* ನಿವೃತ್ತ ಕಾರ್ಯಪಾಲಕ ಅಭಿಯಂತರರು, ಬಾಸೂರು, ಕಡೂರು ತಾ. ಚಿಕ್ಕಮಗಳೂರು ಜಿಲ್ಲೆ.

ಶಿವಯೋಗಿಗಳು ಲಿಂಗೈಕ್ಯ. ಮಠಕ್ಕೆ ನಿಶ್ಚಿತವಾದ ಆದಾಯವಿರಲಿಲ್ಲ. ಇದ್ದ ವಿದ್ಯಾರ್ಥಿಗಳಿಗೆ ಪ್ರಸಾದ ಪೂರೈಸುವುದೇ ಕಷ್ಟದ ಕೆಲಸ. ಅವರ ಗುರುಗಳು ಹೇಳುತ್ತಿದ್ದ ಮಾತಿನ ನೆನಪು. "ನೋಡ್ರಿ ಸ್ವಾಮಿಗಳೇ ಯಾರೇ ಆಗಲಿ ಕಾಯಕ ಮಾಡದೆ ಉಣ್ಣಲಿಕ್ಕೆ (ಪ್ರಸಾದಕ್ಕೆ) ಹಕ್ಕಿಲ್ಲ ರೀ, ಇದಕ್ಕೆ ಸ್ವಾಮಿಗಳು ಹೊರತಲ್ಲ ರೀ, ಹರ ಬೇಕ್ರೀ ಶಿವಕೊಟ್ಟಿರುವ ಎರಡು ಕೈಗಳಲ್ಲಿ ಅದ್ಭುತ ಸಾಧಿಸಬಹುದು ರೀ." ಈ ಮಂತ್ರ ಸದೃಶವಾದ ಮಾತು ಅವರ ಮನದಲ್ಲಿ ಅಚ್ಚೊತ್ತಿತ್ತು. ಹೃದಯದಲ್ಲಿ ಕಾಯಕದ ಬೀಜಗಳು ಬಿದ್ದವು. ಬಿಟ್ಟು ಬಿಡದೆ ಬಸವಾದಿ ಶರಣರ ಆಶಯದಂತೆ ಕಾಯಕದಲ್ಲಿ ಮಗ್ನರಾಗಿ ಸಾಧಿಸಿ ತೋರಿಸಿದ್ದಾರೆ. ೧೧೧ಕ್ಕೆ ಪಾದಾರ್ಪಣೆ ಮಾಡಿದರೂ ಕಾಯಕಕ್ಕೆ ಅಪವಾದವಾಗದಂತೆ ನಡೆದಿದ್ದಾರೆ.

ಪೂಜ್ಯರು ಅಧಿಕಾರ ವಹಿಸಿಕೊಂಡಾಗ ೭೦-೮೦ ವಿದ್ಯಾರ್ಥಿಗಳಿದ್ದರು. ಈಗ ೯೫೦೦ ವಿದ್ಯಾರ್ಥಿಗಳು. ಇವರಿಗೆ ಅನ್ನ, ಅರಿವು, ಆಶ್ರಯಕ್ಕೆ ಅವಕಾಶ. ೧೨೦ಕ್ಕೂ ಹೆಚ್ಚು ವಿದ್ಯಾ ಸಂಸ್ಥೆಗಳು, ಸಾವಿರಾರು ಶಿಕ್ಷಕರ, ಸೇವಾಕರ್ತರ ಕುಟುಂಬಗಳಿಗೆ ಜೀವನದ ಆಧಾರ ಸ್ಥಂಭ ಪೂಜ್ಯರು. ೨೦-೨೧ನೇ ಶತಮಾನದ ಎರಡು ಪವಿತ್ರ ಕೈಗಳು ಸಾಧಿಸಿ ತೋರಿಸಿದ ಅದ್ಭುತ ವಿಸ್ಮಯ. ನೋಡಲಿಕ್ಕೆ ಸಾಮಾನ್ಯ ಕೈಗಳು, ಅವು ಸಾಧಿಸಿದ ಸಾಧನೆಯ ಹಿಂದಿರುವ ಶ್ರಮವನ್ನು ಗುರುತಿಸಿದಾಗ ಸತ್ಯ ಗೋಚರವಾಗುತ್ತದೆ.

**ಪರುಷ ಕೈಗಳು :**

ಅವು ಪೂಜಿಸಿದ ಕೈಗಳು, ಪುಸ್ತಕ ಸದಾ ಹಿಡಿದ ಕೈಗಳು, ಲೇಖನಿ ಹಿಡಿದ ಕೈಗಳು, ಪಾಠ ಮಾಡಿದ ಕೈಗಳು, ಕಪಿಲೆ ಹೊಡೆದ ಕೈಗಳು, ನೇಗಿಲ ಹಿಡಿದ ಕೈಗಳು, ಬಿತ್ತಿದ ಕೈಗಳು, ಕಳೆಕಿತ್ತ ಕೈಗಳು, ನಾಟಿ ಮಾಡಿದ ಕೈಗಳು, ಕೊಯಿಲು ಮಾಡಿದ ಕೈಗಳು, ಒಕ್ಕಲು ಮಾಡಿದ ಕೈಗಳು, ಕಲ್ಲು ಎತ್ತಿದ ಕೈಗಳು, ಕಾಂಕ್ರೀಟ್ ಕಲೆಸಿದ ಕೈಗಳು, ಕಾಡಿನಿಂದ ಸೌದೆ ತಂದು, ಸೌದೆ ಹೊಡೆದ ಕೈಗಳು. ಮುದ್ದೆ ಮಾಡಿದ ಕೈಗಳು, ಗಿಡ ನೆಟ್ಟು ನೀರುಣಿಸಿದ ಕೈಗಳು, ಮಾಡಿ ನೀಡಿ ನೆನಪಿಸಿಕೊಳ್ಳದ ಕೈಗಳು, ಯಂತ್ರ ಬರೆದು ಮಂತ್ರಿಸಿದ ಕೈಗಳು, ವಿದ್ಯಾರ್ಥಿಗಳು ತಪ್ಪಿ ನಡೆದರೆ ಕಿವಿ ಹಿಂಡಿದ ಕೈಗಳು (ಇದರಲ್ಲಿ ಈ ಲೇಖಕನಿಗೂ ಅನುಭವ), ಅಹಂಕಾರವಿಲ್ಲದ ಕೈಗಳು, ಶ್ರೀಮಠವನ್ನು ಜಗದ್ವಿಖ್ಯಾತಿ ಮಾಡಿದ ಕೈಗಳು, ಲಿಂಗಾಂಗ ಸಾಮರಸ್ಯದ ಕೈಗಳು. ೧೨ನೇ ಶತಮಾನದ ಬಸವಾದಿ ಶರಣರ ಕಾಯಕಕ್ಕೆ ಸಾಕ್ಷಿಯಾಗಿ ಭಾಷ್ಯ ಬರೆದ ಕೈಗಳು. ಅವೇ ಶ್ರೀ ಶಿವಕುಮಾರ ಶಿವಯೋಗಿಗಳವರ ಪವಿತ್ರ ಪರುಷ ಕೈಗಳು.

**ಪರಮ ದಾಸೋಹಿಗಳು :**

೧೨ನೇ ಶತಮಾನದಲ್ಲಿ ಬಸವಾದಿ ಶರಣರು ನೀಡಿದ ಮತ್ತೊಂದು ಮಹತ್ವದ ಸಂದೇಶ, ದಾಸೋಹ. ಕಾಯಕ ದಾಸೋಹ ಒಂದಕ್ಕೊಂದು ಪೂರಕ, ಅವಿನಾಭಾವ ಸಂಬಂಧದ ತತ್ತ್ವಗಳು. ನಾನು ದಾಸ ಸ್ವೀಕರಿಸುವವರು ಒಡೆಯರು, ಶಿವ ಸ್ವರೂಪಿಗಳು ಎಂದು ತಿಳಿದು, ನಾನು, ನನ್ನದು, ನನ್ನಿಂದಲೇ, ನನಗೆ ಅನ್ನುವ ಅಹಂಕಾರ, ಮಮಕಾರ, ಅಜ್ಞಾನ, ಅವಿವೇಕಗಳನ್ನು ತೊಡೆದು ಹಾಕಿ, ಕೈಂಕರ್ಯ ಭಾವದಿಂದ ಸೇವೆ ಸಲ್ಲಿಸುವುದೇ ದಾಸೋಹ. ದೇಹ ದಂಡನೆ, ಮನಸ್ಸಿನ ಬಳಕೆ, ಸತ್ಯ ಶುದ್ಧ ಕಾರ್ಯ ತತ್ಪರತೆ, ಪ್ರಾಮಾಣಿಕ ಬದುಕು, ಅರ್ಚನೆ, ಅರ್ಪಣೆ, ಅನುಭವ, ಅನುಭಾವ, ಐಕ್ಯ ಈ ಮಹಾನ್ ತತ್ತ್ವದ ಆಚರಣೆಯೇ ಪರಮ ದಾಸೋಹದ ಸ್ಥಿತಿ. ಇದನ್ನು ಯಾರು ಪಡೆದಿರುವರೋ ಅವರು ಪರಮ ದಾಸೋಹಿಗಳು. ಇಂತಹ ಪರಮ ದಾಸೋಹಿಯಾಗಿ ಮಾನವ್ಯದ ಉತ್ಕ್ರಾಂತಿಗೆ ತಮ್ಮ ಜೀವನ ಮೀಸಲಿಟ್ಟಿದ್ದಾರೆ. ಸಂತ ಶಿವಯೋಗಿ, ಮನುಕುಲದ ಮಹಾ ಬೆಳಕು ಸಿದ್ಧಗಂಗೆ ಅಪ್ಪಗಳವರು.

ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳು ಒಮ್ಮೆ ಪೂಜ್ಯರನ್ನು ಕುರಿತು **'ನೋಡ್ರೀ ಸ್ವಾಮಿಗಳೇ ಮಠಕ್ಕೆ ಹೆಚ್ಚು ಜನ ಬರಬೇಕು. ಪ್ರಸಾದ ಸ್ವೀಕರಿಸಿ ಸಂತೃಪ್ತಿಪಟ್ಟು ಸಂತಸದಿಂದ ಹೋಗಬೇಕ್ರಿ. ಎಂತಹ ಕಷ್ಟ ಕಾಲದಲ್ಲೂ ಪ್ರಸಾದ ದಾಸೋಹಕ್ಕೆ ಲೋಪವಾಗಬಾರದ್ರೀ'** ಈ ಮಾತುಗಳು ಪೂಜ್ಯರ ಕಿವಿಯಲ್ಲಿ ಸದಾ ಗುಯ್ಂಗುಟ್ಟಿ ಎಚ್ಚರಿಸುತ್ತಿದ್ದವು. ಅತ್ಯಂತ ಕಷ್ಟಕಾಲದಲ್ಲಿಯೂ ಅಧೀರರಾಗದೆ ಬಸವಣ್ಣನವರ **'ಕುಡುವವಂ ಸಂಗಂ ಬೇಡುವವಂ ಸಂಗಮ ದೇವನೆನಗೊಂದು ಭಾವವಿಲ್ಲ'** ಎಂಬ ಅಮೃತವಾಣಿ ಧೈರ್ಯ ತುಂಬಿ ನಡೆಸಿದ ಘಟನೆಗಳು ಅನೇಕ. ಅಂತಹ ಒಂದು ಘಟನೆಯನ್ನು ಪೂಜ್ಯರ ಮಾತಿನಲ್ಲಿ ತಿಳಿಯೋಣ.

ಭೀಕರ ಬರಗಾಲದಿಂದ ೧೯೭೬-೭೭ರಲ್ಲಿ ರಾಜ್ಯ ಕಂಗೆಟ್ಟು ಹೋದ ಸಂದರ್ಭ. ಶ್ರೀಮಠದ ದಾಸೋಹ ಸೇವೆಯನ್ನು ನಡೆಸಿಕೊಂಡು ಹೋಗುವುದರ ಜೊತೆಗೆ ಗ್ರಾಮಾಂತರಗಳಿಂದ ಬರುತ್ತಿದ್ದ ಬಡವರಿಗೆ ದಾಸೋಹವನ್ನು ಮಾಡಲೇಬೇಕಾದ ಪರಿಸ್ಥಿತಿ. ಸಹಸ್ರ





ಸಹಸ್ರ ಸಂಖ್ಯೆಯಲ್ಲಿ ಆಗಮಿಸುತ್ತಿದ್ದ ಆ ಗ್ರಾಮ ಬಂಧು ಭಗಿನಿಯರ 'ಹೊಟ್ಟೆ ಬರಿದೋ ಬರಿದು' ತತ್ತರಿಸುತ್ತ ಬರುತ್ತಿದ್ದ ಆ ದೃಶ್ಯ ಮರೆಯಲಾಗದ್ದು. ಅವರೆಲ್ಲರಿಗೆ ಮಠದ ಮುಂದೆಯೇ ಅವರು ತಂದ ಪಾತ್ರೆ ಪರಡಿಗಳಿಗೆ ಪ್ರಸಾದವನ್ನು ನೀಡುತ್ತಿರಲಾಗುತ್ತಿತ್ತು. ಸೋಯಾಬೀನ್ ಕಾಳನ್ನು ಬೇಯಿಸಿ ಸಾಲುಸಾಲಾಗಿ ನಿಲ್ಲುತ್ತಿದ್ದ ಆ ಬಂಧುಗಳಿಗೆ ಬೊಗಸೆ ತುಂಬಾ ಹಾಕುತ್ತಿದ್ದೆವು. ಇದು ಸುಮಾರು ತಿಂಗಳುಗಳವರೆಗೆ ನಡೆದು ಬಂದಿತು. ತುಮಕೂರು ನಗರದ ಪ್ರಮುಖರು ಹತ್ತಾರು ಮಂದಿ ಶ್ರೀಮಠಕ್ಕೆ ಬಂದು ನೋಡಿದರು. ಒಮ್ಮೆ ಪ್ರಸಾದ ವಿತರಣೆಯ ನಂತರ ನಮ್ಮ ಕಾರ್ಯಾಲಯಕ್ಕೆ ಬಂದರು. 'ಬುದ್ಧಿ ತಮ್ಮಲ್ಲಿ ಅರಿಕೆ ಮಾಡಿಕೊಳ್ಳುತ್ತಿದ್ದೇವೆ. ದಯವಿಟ್ಟು ಈ ಜನಸಮೂಹಕ್ಕೆ ಮಾಡುವ ದಾಸೋಹ ಸೇವೆಯನ್ನು ನಿಲ್ಲಿಸುವ ಯೋಚನೆ ಮಾಡಿ. ಮಕ್ಕಳಿಗೆ ಮಾಡುತ್ತಿರುವ ಸೇವೆಯನ್ನು ಮುಂದುವರೆಸಿ' ಎಂದರು. ಹತ್ತು ನಿಮಿಷ ಸುಮ್ಮನೆ ಕುಳಿತೆವು. ಅವರು ಮತ್ತೆ ಕೇಳಿದರು ತಾವೇನೂ ಹೇಳಲಿಲ್ಲ ಎಂದು. ನಾವು ಉತ್ತರಿಸಲೇ ಬೇಕಾಯಿತು. 'ನೀವು ಹೇಳುತ್ತಿರುವುದು ಸರಿಯೇ ? ಆದರೆ ದಾಸೋಹವನ್ನು ನಿಲ್ಲಿಸುವುದಕ್ಕೇಕೆ ಯೋಚಿಸಬೇಕು ? ನಡೆಸುವುದಕ್ಕೆ ಯೋಚಿಸಬೇಕಲ್ಲವೆ ?' ಎಂದೆವು. ಆ ಪ್ರಮುಖರೆಲ್ಲ ಮರು ಮಾತಾಡದೆ ಎದ್ದು ಹೋದರು. ನಾವೆಂದೂ ಶ್ರೀಮಠದ ಕೈಂಕರ್ಯವನ್ನು 'ನಾವು' ಮಾಡುತ್ತಿದ್ದೇವೆ ಎಂದು ಅಂದುಕೊಂಡಿಲ್ಲ. 'ಕುಡುವವಂ ಸಂಗಂ ಬೇಡುವವಂ ಸಂಗಮದೇವನೆನ ಗೊಂದು ಭಾವವಿಲ್ಲ' ಎಂದು ನಂಬಿ ನಡೆದಿದ್ದೇವೆ.

ಮಾಡಿ ನೆನಪಿಸೋದು ವ್ಯವಹಾರ, ಮಾಡಿ ಮಾತನಾಡುವನು ಡಾಂಭಿಕ, ಮಾಡದೆ ಮಾಡಿದೆನೆಂದು ಹೇಳುವುದು ಅಪರಾಧ, ಮಾಡಿ ಮರೆಯೋದು ವಿರಾಗ, ಮಾಡಿ ಮೌನವಾಗಿರುವನು ದೇವರು. ಮಾಡಿ ಮರೆತು ವಿರಾಗಿಯಾಗಿದ್ದಾರೆ, ಮಾಡಿದೆನೆಂಬ ಅಹಂ ಇಲ್ಲಲ್ಲ. ಮಾಡಿ ಮೌನವಾಗಿ ಮರೆಯಾಗಿ ನಿಂತು ದೈವತ್ವ ಪಡೆದು, ದಿವ್ಯಚೇತನವಾಗಿದ್ದಾರೆ, ಅವರೇ ನಾಡಿನ ಅಪರೂಪದ ಶಿವಯೋಗಿ, ಪ್ರಸಾದ ದಾಸೋಹದ ಪ್ರತಿರೂಪ ಪೂಜ್ಯ ಸಿದ್ಧಗಂಗೆಯ ಸಿದ್ಧಿಪುರುಷ ಡಾ. ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳು. ಈ ಅಭಿನವ ಬಸವಣ್ಣನವರಿಗೆ ಕೋಟಿ ನಮನ. ಇನ್ನು ಹತ್ತಾರು ವರ್ಷಗಳು ನಮ್ಮ ನಿಮ್ಮೆಲ್ಲರನ್ನು ಆಶೀರ್ವದಿಸುವ ಅವಕಾಶ ಪರಶಿವನು ಕರುಣಿಸಲೆಂದು ಭಕ್ತಿಯಿಂದ ಪ್ರಾರ್ಥಿಸೋಣ.

* * *

## ಶ್ರದ್ಧಾಂಜಲಿ



ಹಿರಿಯ ಸಾಹಿತಿ

### ಪ್ರೊ. ವೀರೇಂದ್ರ ಸಿಂಪಿ

ಹಿರಿಯ ಸಾಹಿತಿ, ಲಲಿತ ಪ್ರಬಂಧಗಳ ಸೃಷ್ಟಿಗೆ ಭಾಷ್ಯ ಬರೆದ ಪ್ರೊ. ವೀರೇಂದ್ರ ಸಿಂಪಿ ಅವರು ಮೇ ೩೧ ರಂದು ನಿಧನರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ.

ಬೀದರ್‌ನ ಭೂಮರೆಡ್ಡಿ ಪದವಿ ಕಾಲೇಜಿನಲ್ಲಿ ಇಂಗ್ಲೀಷ್ ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದ ಪ್ರೊ. ವೀರೇಂದ್ರ ಸಿಂಪಿಯವರು ತಮ್ಮ ೭೯ನೇ ವಯಸ್ಸಿನಲ್ಲಿ ಈ ಲೋಕಕ್ಕೆ ವಿದಾಯ ಹೇಳಿದರು. ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಹಿರಿಯ ಸಾಹಿತಿ ಲಿಂ. ಸಿಂಪಿ ಲಿಂಗಣ್ಣನವರ ಸುಪುತ್ರರಾದ ಶ್ರೀ ಸಿಂಪಿ ಅವರು ಬೀದರ್‌ನ ಕನ್ನಡ ಪರ ಸಂಘಟನೆಗಳಲ್ಲಿ ಕ್ರಿಯಾಶೀಲರಾಗಿ ತೊಡಗಿಸಿಕೊಂಡಿದ್ದರು. ಉತ್ತಮ ವಾಗ್ಮಿಗಳಾಗಿದ್ದ ಶ್ರೀಯುತರ ಹಲವಾರು ಲಲಿತ ಪ್ರಬಂಧಗಳ ಸಂಕಲನಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯೂ ಸೇರಿದಂತೆ ಅನೇಕ ಬಹುಮಾನಗಳು ಬಂದಿದ್ದು, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯೂ ಸೇರಿದಂತೆ ಅನೇಕ ಪ್ರಶಸ್ತಿಗಳಿಗೆ ಭಾಜನರಾಗಿದ್ದರು.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಶತಮಾನೋತ್ಸವ ಗ್ರಂಥ ಪ್ರಕಟಣಾ ಸಮಿತಿಯ ಸದಸ್ಯರಾಗಿ ತಮ್ಮ ಅಮೂಲ್ಯ ಸಲಹೆಗಳನ್ನು ನೀಡಿದ್ದರು. ಸಿದ್ಧಗಂಗಾ ಮಾಸ ಪತ್ರಿಕೆಗಾಗಿ ತಮ್ಮ ಮೌಲಿಕ ಲೇಖನಗಳನ್ನು ನೀಡಿ ಸಹಕರಿಸಿದ್ದರು. ಪರಮಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ಅಪಾರವಾದ ಭಕ್ತಿ ಗೌರವಗಳನ್ನಿಟ್ಟುಕೊಂಡಿದ್ದರು.

ಶ್ರೀ ಸಿದ್ಧಗಂಗಾ ಗುರುಪರಂಪರೆ ಶ್ರೀಯುತರ ಆತ್ಮಕ್ಕೆ ಶಾಂತಿಯನ್ನು ಹಾಗೂ ಕುಟುಂಬದವರಿಗೆ ಅವರ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ದಯಾಮಯನಾದ ಭಗವಂತನು ಕರುಣಿಸಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

# ಬಸವಣ್ಣನವರು ಪ್ರತಿಪಾದಿಸಿದ ಪ್ರಜಾಪ್ರತಿನಿಧಿಗಳ ನೈತಿಕ ಮೌಲ್ಯಗಳು

– ಯೋಗೀಶ್ ನಿರ್ವಿಕಲ್ಪ *

ಪ್ರಜಾಸತ್ತಾತ್ಮಕ ತತ್ತ್ವಗಳ ಪ್ರತೀಕವಾದ 'ಅನುಭವ ಮಂಟಪ'ವನ್ನು ಸ್ಥಾಪಿಸುವುದರ ಮೂಲಕ ಪ್ರಜಾಸತ್ತಾತ್ಮಕ ತತ್ತ್ವ ವಿಚಾರಗಳಿಗೆ ಮುನ್ನುಡಿ ಬರೆದವರು ಶ್ರೇಷ್ಠ ಸಮಾಜ ಸುಧಾರಕರಾದ ಬಸವಣ್ಣನವರು. ೧೨ನೇ ಶತಮಾನದ ಅಂದಿನ ರಾಜಸತ್ತೆಯ ದಿನಗಳಲ್ಲಿಯೇ ಅವರು ನಾಡಿಗೆ ಪ್ರಜಾಪ್ರಭುತ್ವದ ಬೆಳಕನ್ನು ಹರಿಸಿದ ಶ್ರೇಷ್ಠ ದಾರ್ಶನಿಕ. ಭಾರತೀಯ ಇತಿಹಾಸದಲ್ಲಿಯೇ ಪರಿಪೂರ್ಣ ಸಮಾನತೆಯ ಹಕ್ಕು ಪ್ರತಿಪಾದಿಸಿದ ಕೀರ್ತಿ ಅವರದು. ಒಬ್ಬ ಪ್ರಜಾಪ್ರತಿನಿಧಿ ಯಾವ ಆದರ್ಶದ ನೈತಿಕ ಮಾರ್ಗದಲ್ಲಿ ಸಾಗಬೇಕೆಂಬ ತತ್ತ್ವ ಸಿದ್ಧಾಂತಕ್ಕೆ ಅವರು ಸಾಕ್ಷೀಪ್ರಜ್ಞೆಯಾಗಿದ್ದರು. ಅಂದು ಅವರು ಬಿಜ್ಜಳ ರಾಜನ ಆಸ್ಥಾನದಲ್ಲಿ ಪ್ರಧಾನಮಂತ್ರಿಯಾಗಿ ಕಾರ್ಯನಿರ್ವಹಿಸಿದಂತಹ ದಿನಗಳಲ್ಲಿ ಅವರು ಅನುಷ್ಠಾನಿಸಿ, ಪ್ರತಿಪಾದಿಸಿದ ಆದರ್ಶ ನೈತಿಕ ಮೌಲ್ಯಗಳು ಪ್ರತಿಯೊಬ್ಬ ಪ್ರಜಾಪ್ರತಿನಿಧಿಗೂ ಸದಾ ದಾರಿದೀಪ.

ಪ್ರತಿಯೊಬ್ಬ ಪ್ರಜಾಪ್ರತಿನಿಧಿ ಮತ್ತು ಅಧಿಕಾರಸ್ಥ ವ್ಯಕ್ತಿ ಆದರ್ಶ ಮೌಲ್ಯಗಳ ಆರಾಧಕನಾಗಿರಬೇಕೆಂಬ ದಿವ್ಯ ಸಂದೇಶವನ್ನು ಬಸವಣ್ಣನವರು ಉಪದೇಶಿಸಿದಂತಹ ಸಂದೇಶಗಳಲ್ಲಿ ನಾವು ಕಾಣಬಹುದು. ಅಂದು ಅವರು ಬಿಜ್ಜಳನ ಆಸ್ಥಾನದಲ್ಲಿ ಪ್ರಧಾನಮಂತ್ರಿಯಾಗಿ ಅಧಿಕಾರ ಸ್ವೀಕರಣಾ ಸಂದರ್ಭದಲ್ಲಿ ಪರಮಾತ್ಮನ ಸಾಕ್ಷಿಯಾಗಿ ನುಡಿದ ಅವರ ಪ್ರಮಾಣದ ನುಡಿಗಳು ಸರ್ವಕಾಲಕ್ಕೂ ಸರ್ವರಿಗೂ ಆದರ್ಶ ಮತ್ತು ಅನ್ವಯವಾದದ್ದು.

**ಹೊನ್ನಿನೊಳಗೊಂದೊರೆಯ ಸೀರೆಯೊಳಗೊಂದೆಳೆಯ**
**ಅನ್ನದೊಳಗೊಂದಗುಳ**
**ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ**
**ನಿಮ್ಮಾಣೆ, ನಿಮ್ಮ ಪುರಾತರಾಣೆ**
**ನಿಮ್ಮ ಶರಣರಿಗಲ್ಲದೆ ಮತ್ತೊಂದಕ್ಕೆ ಈಯೆನು;**
**ಕೂಡಲಸಂಗಮದೇವಾ ನಿಮ್ಮಾಣೆ !**

ಸಾರ್ವಜನಿಕ ಹಿತ ಕಾಪಾಡುವಂತಹ ಹೊಣೆ ಹೊತ್ತ ಪ್ರಜಾಪ್ರತಿನಿಧಿಗಳು ಎಂದೂ ತಮ್ಮ ಅಧಿಕಾರ ವ್ಯಾಪ್ತಿಯನ್ನು ಸ್ವಾರ್ಥಹಿತಕ್ಕಾಗಿ ಬಳಸಬಾರದೆಂಬ ಸಂದೇಶವನ್ನು ನಾವಿಲ್ಲಿ ಅವಲೋಕಿಸಬಹುದು. 'ಹೊತ್ತಾರೆ ಎದ್ದು ಸರ್ವಜನರ ಕಲ್ಯಾಣದ ಸಮಗ್ರ ವಿಕಾಸಕ್ಕೆ ಪೂರಕವಾದ ಜನಹಿತ ಯೋಜನೆಗಳನ್ನು ಚಿಂತಿಸಬೇಕೆ ವಿನಾ ಎದ್ದು ಕಣ್ಣು ಹೊಸೆಯುತ್ತ ಎನ್ನ ಒಡಲಿಂಗೆ, ಎನ್ನ ಒಡವೆಗೆ ಮತ್ತು ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದಡೆ ತಲೆದಂಡ !' ಎಂದು ತಿಳಿಸುವುದರ ಮೂಲಕ ಬಸವಣ್ಣನವರು ಪ್ರಜಾಪ್ರತಿನಿಧಿಯ ದಿನಚರಿ ಯಾವ ರೀತಿ ಸಾಗಬೇಕೆಂಬುದನ್ನು ಅರ್ಥಪೂರ್ಣವಾಗಿ ಮನಗಾಣಿಸಿದ್ದಾರೆ. ಸಾರ್ವಜನಿಕ ಪರಿಶ್ರಮದ ಪ್ರತೀಕವಾದ ಹಣದ ಒಂದೆಳೆಯೂ ಸ್ವಾರ್ಥದ ಬಳಕೆಯಾಗದೇ ಲಿಂಗಸ್ವರೂಪವಾದ ಸಮಾಜದ ಕಲ್ಯಾಣಕ್ಕಾಗಿಯೇ ಸಲ್ಲುವಂತೆ ನೋಡಿಕೊಳ್ಳುವ ಕರ್ತವ್ಯ ಪ್ರಜ್ಞೆ ಸದಾ ಪ್ರಜಾಪ್ರತಿನಿಧಿಯಲ್ಲಿ ಜಾಗೃತವಾಗಿರಬೇಕೆಂಬ ಶುದ್ಧ ನೈತಿಕ ತತ್ತ್ವಾಭಿಪ್ರಾಯ ಬಸವಣ್ಣನವರದು.

**ಪರಧನ ಮತ್ತು ಪರಸ್ತ್ರೀ :**

ಪ್ರಜಾಪ್ರತಿನಿಧಿ ಶುದ್ಧ ನೈತಿಕ ಆದರ್ಶ ಮೌಲ್ಯಗಳ ಆಶ್ರಯದಲ್ಲಿಯೇ ಜೀವಿಸಬೇಕೆಂದು ತಿಳಿಸುವ ಬಸವಣ್ಣನವರು ಪ್ರಜಾಪ್ರತಿನಿಧಿ ಎಂದೂ ಮೌಲ್ಯಗಳನ್ನು ಕಡೆಗಣಿಸಬಾರದೆನ್ನುತ್ತಾರೆ. ಒಂದು ವೇಳೆ ಪ್ರಜಾಪ್ರತಿನಿಧಿ ಮೌಲ್ಯಗಳಿಂದ ವಿಮುಖನಾದರೆ ಅದು ಸಮಾಜಕ್ಕೆ ತಪ್ಪು ಸಂದೇಶ ರವಾನಿಸಿದಂತೆ ಎನ್ನುವ ಅವರು; ಇದರ ಪರಿಣಾಮ ಸಮಾಜ ತಪ್ಪು ಹಾದಿಯಲ್ಲಿ ಸಾಗಲು ಕಾರಣವಾಗಿ ಪ್ರಜಾತಂತ್ರಾತ್ಮಕ ವ್ಯವಸ್ಥೆ ಸಮಾಜದಲ್ಲಿ ನಂಬಿಕೆ ಮತ್ತು ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ ಎಂದು ತಿಳಿಸುತ್ತಾರೆ. ಅವರ ಈ ವಿಚಾರಧಾರೆ ಅವರೊಳಗಿನ ಪ್ರಜಾತಂತ್ರ ವ್ಯವಸ್ಥೆಯ ರಾಜಕೀಯ ಮುತ್ಸದ್ಧಿತನಕ್ಕೊಂದು ಹಿಡಿದ ಕೈಗನ್ನಡಿ.

**ಹರಿವ ಹಾವಿಂಗಂಜೆ, ಉರಿಯ ನಾಲಿಗೆಗಂಜೆ**
**ಸುರಗಿಯ ಮೊನೆಗಂಜೆ !**
**ಒಂದಕ್ಕಂಜುವೆ, ಒಂದಕ್ಕಳುಕುವೆ;**
**ಪರಸ್ತ್ರೀ–ಪರಧನವೆಂಬೀ ಜೂಬಿಂಗಂಜುವೆ !**
**ಮುನ್ನಂಜದ ರಾವಣನೇ ವಿಧಿಯಾದ ಕಾರಣ**
**ಅಂಜುವೆನಯ್ಯಾ, ಕೂಡಲ ಸಂಗಮದೇವಾ .**

ಪರಧನ ಮತ್ತು ಪರಸ್ತ್ರೀಗಳ ಸಂಗದಿಂದ ವ್ಯಕ್ತಿಯ ಚಾರಿತ್ರ್ಯವೇ ಸಂಪೂರ್ಣ ಹಾಳಾಗುತ್ತದೆ ಎಂಬುದನ್ನು ಮನಗಂಡಿದ್ದ ಬಸವಣ್ಣನವರು ಅಂದೇ ಅವರು ಅವುಗಳಿಂದ ಬಹುದೂರ ಇರಬೇಕೆಂಬ ಸಂದೇಶವನ್ನು ಪ್ರಜಾಪ್ರತಿನಿಧಿಗಳಿಗೆ ತಿಳಿಸಿರುವುದು ಅತ್ಯಂತ ಗಮನಾರ್ಹ. ಪ್ರಜಾಪ್ರತಿನಿಧಿ ಎಂದೂ ಅಂತರಂಗ ಮತ್ತು ಬಹಿರಂಗದೊಳಗೊಂದು ವೇಷ ಧರಿಸಿ ಜೀವಿಸಬಾರದು ಎನ್ನುವ ಅವರು ನಿರ್ವಂಚನೆಯ ಚಿತ್ತದಿಂದ

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ–೫೭೭ ೨೦೧





ಸಾರ್ವಜನಿಕ ಹಿತ ಕಾರ್ಯಗಳನ್ನು ಮಾಡಬೇಕೆನ್ನುತ್ತಾರೆ. ಅಧಿಕಾರ ಲಾಲಸೆ, ಅಹಂಕಾರ, ಸಂಪತ್ತಿನ ಅತಿ ಸಂಗ್ರಹ, ಮೋಸ ಮತ್ತು ಕೀರ್ತಿ ವಾರ್ತೆಗಳಿಗಾಗಿ ಮಾಡುವ ಪ್ರತಿಯೊಂದು ಕೆಲಸ ಕಾರ್ಯಗಳೂ ಸಂಪೂರ್ಣ ನಿರರ್ಥಕ ಎನ್ನುವಂತಹ ವಾದ ಸರಣಿ ಅವರದು.

**ಆಯುಷ್ಯವುಂಟು ಪ್ರಳಯವಿಲ್ಲೆಂದು :**

ಆಯುಷ್ಯವುಂಟು ಪ್ರಳಯವಿಲ್ಲೆಂದು;
ಅರ್ಥವ ಮಡುಗದಿರಿ;
ಆಯುಷ್ಯ ತೀರಿ ಪ್ರಳಯ ಬಂದಡೆ
ಅರ್ಥವನುಂಬುವರಿಲ್ಲ
ನೆಲನನಗೆದು ಮಡುಗದಿರಾ
ನೆಲ ನುಂಗಿದಡುಗುಳುವುದೆ ?

ನೀರ ಮೇಲಿನ ಗುಳ್ಳೆಯಂತೆ ಅಶಾಶ್ವತವಾದ ಈ ಕಾಯದ ಸುಖಕ್ಕಾಗಿ ಮನುಷ್ಯ ನಾನಾ ವೇಷ ಧರಿಸಿ, ಮಡದಿ ಮಕ್ಕಳ ಹಿತ ಭವಿಷ್ಯಕ್ಕೆಂದು ಮೋಸ ಮತ್ತು ವಂಚನೆಯ ಹಾದಿ ತುಳಿದು ಹಣ ಸಂಗ್ರಹಿಸಿ ಅದನ್ನು ಗುಪ್ತ ಸ್ಥಳಗಳಲ್ಲಿ ಬಚ್ಚಿಡುವ ಸ್ವಾರ್ಥಪರ ಚಿಂತನೆಯವರನ್ನು ಕಂಡು 'ಕಾಂಚನಕ್ಕೆ ಕೈ ನೀಡುವ ಜಗ ಭಂಡರ ಮೆಚ್ಚುವನೆ ಪರಮಾತ್ಮನು !' ಎಂದು ಪ್ರಶ್ನಿಸುತ್ತಾರೆ. ಅಖಿಲ ಬ್ರಹ್ಮಾಂಡದಲ್ಲಿರುವ ಪ್ರತಿಯೊಂದು ಚರಾಚರ, ಜಡಚೇತನಗಳೆಲ್ಲವೂ ಪರಮಾತ್ಮನಿಂದ ಕೊಡಲ್ಪಟ್ಟವುಗಳು. ಅವುಗಳನ್ನು ಮನುಷ್ಯ ಅಗತ್ಯಕ್ಕೆ ತಕ್ಕಂತೆ ಉಪಯೋಗಿಸಬೇಕೇ ವಿನಾ ಅವುಗಳ ದುರುಪಯೋಗ ಮತ್ತು ಅತಿ ಸಂಗ್ರಹ ಪರಮಾತ್ಮನ ಸೃಷ್ಟಿ ನಿಯಮಕ್ಕೆ ವಿರುದ್ಧವಾದದ್ದೆಂಬ ಎಚ್ಚರಿಕೆಯ ಸಂದೇಶವಾಣಿ ಬಸವಣ್ಣನವರು ನೀಡುತ್ತಾರೆ.

ಹಣವನ್ನು ಸದಾ ನೀತಿಯುತ ಹಾದಿಯಿಂದಲೇ ಗಳಿಸಬೇಕು. ಅಧರ್ಮದಿಂದ ಬಂದ ಹಣ ಬಹುಕಾಲ ಉಳಿಯದು ಮತ್ತು ಒಳಿತು ಆಗದು ಎನ್ನುವ ಬಸವಣ್ಣನವರ ಸಂದೇಶದ ನುಡಿಗಳಲ್ಲಿ ರಾಷ್ಟ್ರ ಕಲ್ಯಾಣದ ಮುಖ್ಯ ಆಶಯ ಅಡಗಿದೆ. 'ಹಣ ಸಂಗ್ರಹಿಸಿ, ಅದನ್ನು ನಿಕ್ಷೇಪ ಮಾಡುವ ಬದಲು ಅದು ಯೋಗ್ಯರಾದವರ ಅನುಕೂಲಕ್ಕೆ ಸದ್ಬಳಕೆಯಾಗಬೇಕು. ಹಣ ಎಂದೂ ನಿಂತ ನೀರಾಗದೇ ಅದು ಹರಿಯುವ ನದಿಯಾಗಬೇಕು. ಹಣ ಅಥವಾ ಸಂಪತ್ತಿನ ಕ್ರೋಢೀಕರಣ ರಾಷ್ಟ್ರದ ಅಸಂಖ್ಯಾತ ಸಮಸ್ಯೆಗಳಿಗೆ ರಾಜಮಾರ್ಗವಾಗುತ್ತದೆ' ಎಂಬ ಅರ್ಥಪೂರ್ಣ ಅರ್ಥಶಾಸ್ತ್ರದ ಒಳಮರ್ಮದ ಸಂದೇಶವನ್ನು ಬಸವಣ್ಣನವರು ವ್ಯಕ್ತಪಡಿಸಿರುವ ವಚನಗಳಲ್ಲಿ ವ್ಯಕ್ತವಾಗಿದೆ.

ಬಸವಣ್ಣನವರ ದೃಷ್ಟಿಯಲ್ಲಿ ಸ್ವಾರ್ಥ, ಮೋಸ ಮತ್ತು ಭ್ರಷ್ಟಾಚಾರದಂತಹ ಮನೋವೃತ್ತಿಗಳು ಮನಸ್ಸಿನ ದೌರ್ಬಲ್ಯಗಳಾಗಿದ್ದವು. ಅವುಗಳಿಂದ ಮನುಷ್ಯನು ಮುಕ್ತನಾಗಿ ಸಮಾಜದಲ್ಲಿ ಬದುಕಬೇಕೆಂಬ ಮುಖ್ಯ ಉದ್ದೇಶ ಅವರದು. ಧಾರ್ಮಿಕತೆಯ ಶೂನ್ಯತ್ವ ಭಾವ ಮನುಷ್ಯನ ಸ್ವಾರ್ಥ, ಮೋಸ ಮತ್ತು ಭ್ರಷ್ಟಾಚಾರದಂತಹ ಕೃತ್ಯಗಳಿಗೆ ಕಾರಣ ಎನ್ನುವ ಅವರು ಸಮಾಜಮುಖಿ ಚಿಂತನೆಯ ಕಾರ್ಯಗಳು ಮನುಷ್ಯನ ಪ್ರಮುಖ ಧ್ಯೇಯವಾಗಬೇಕೆಂದು ಬಯಸುತ್ತಾರೆ. ಸಮಾಜಮುಖಿ ಚಿಂತನೆಯ ಕಾರ್ಯಗಳಿಂದ ಮಾತ್ರ ಮನುಷ್ಯ ಸ್ವಾರ್ಥದಂತಹ ಕ್ಷುಲ್ಲಕ ವಿಚಾರದಿಂದ ಮುಕ್ತನಾಗಲು ಸಾಧ್ಯ ಎಂದು ಸಹ ಅವರು ತಿಳಿಸುತ್ತಾರೆ. ಈ ಕಾರಣಕ್ಕಾಗಿಯೇ ಅವರನ್ನು ಶ್ರೇಷ್ಠ ಅರ್ಥಶಾಸ್ತ್ರಜ್ಞ ಎಂದು ಕರೆದಿರುವುದು.

**ಕುದುರೆ ಸತ್ತಿಗೆಯವರ ಕಂಡಡೆ ಹೊರಳಿ**
**ಬಿದ್ದು ಕಾಲ ಹಿಡಿವರು;**
**ಬಡಭಕ್ತರು ಬಂದಡೆ ಎಡೆಯಿಲ್ಲ**
**ಅತ್ತ ಸನ್ನಿಯೆಂಬರು;**
**ಎನ್ನೊಡೆಯ ಕೂಡಲ ಸಂಗಮದೇವ**
**ತಡೆಗೆಡಹಿ ಮೂಗು ಕೊಯ್ಯದೆ ಮಾಣ್ಬನೆ ?**

ಅಧಿಕಾರ ಎನ್ನುವಂಥದ್ದು ಒಂದು ವಿಷದಂತೆ ! ಅದು ಮನುಷ್ಯನ ಬುದ್ಧಿಶಕ್ತಿಯನ್ನು ಚಂಚಲಗೊಳಿಸುತ್ತದೆ. ಹೃದಯವನ್ನು ಕಠಿಣಗೊಳಿಸಿ, ಅರ್ಥಮಾಡಿಕೊಳ್ಳುವಂತಹ ಮನವನ್ನು ದಾರಿ ತಪ್ಪಿಸುತ್ತದೆ. ಈ ಎಲ್ಲಾ ಕಾರಣದಿಂದ ಪ್ರಜಾಪ್ರತಿನಿಧಿ ಸದಾ ವಿವೇಕಶಾಲಿಯಾಗಿರಬೇಕು. ಸಾರ್ವಜನಿಕ ಹಿತ ಕಾರ್ಯದಲ್ಲಿ ತನ್ಮಯಗೊಂಡ ಪ್ರಜಾಪ್ರತಿನಿಧಿ ಎಂದಿಗೂ ಶ್ರೀಮಂತ ಮತ್ತು ಬಡವನೆಂಬ ವ್ಯತ್ಯಾಸ ಕಂಡುಕೊಳ್ಳದೇ ಎಲ್ಲರನ್ನು ಸಮಾನಭಾವದಿಂದ ಕಾಣುವ ಸಮಾನತೆಯ ತತ್ತ್ವವನ್ನು ಅಳವಡಿಸಿಕೊಂಡಿರ ಬೇಕು. ಪ್ರಜಾಪ್ರತಿನಿಧಿ ಸ್ವಜನ ಪಕ್ಷಪಾತದಿಂದಲೂ ದೂರವಿರಬೇಕೆನ್ನುವ ಬಸವಣ್ಣನವರು, ಸಮಾಜದ ಸಮಗ್ರ ಹಿತ ಕಾಪಾಡುವ ಮುಖ್ಯ ಧ್ಯೇಯ ಪ್ರಜಾಪ್ರತಿನಿಧಿಯ ಮುಖ್ಯ ಕರ್ತವ್ಯವಾಗಿರಬೇಕೆಂಬುದು ಅವರ ಮುಖ್ಯ ಸಂದೇಶವಾಗಿದೆ.

ಪ್ರಜೆಗಳ ನೋವು, ದುಃಖಗಳಿಗೆ ಸ್ಪಂದಿಸುವುದರ ಮೂಲಕ ಪ್ರಜೆಗಳ ಕಣ್ಣಿನಲ್ಲಿ ದುಃಖದ ಕಣ್ಣೀರು ಬಾರದಂತೆ ನೋಡಿಕೊಳ್ಳಬೇಕಾದ ಕರ್ತವ್ಯ ಪ್ರಜಾಪ್ರತಿನಿಧಿಯದು ಎನ್ನುವ ಅವರು 'ಭಕ್ತರ ನೋವೇ ಅದು ಲಿಂಗದ (ಪ್ರಜೆಗಳ) ನೋವು' ಎಂದು ತಿಳಿಸುವುದರ ಮೂಲಕ ಸಮಾಜದ ಪ್ರಭುಗಳಾದ ಪ್ರಜೆಗಳಲ್ಲಿಯೇ ಭಗವಂತನನ್ನು ಕಂಡು ಸಮಾಜ ಶಾಸ್ತ್ರವನ್ನು ಒಂದು ಹೊಸ ನೆಲೆಯಲ್ಲಿ ಅರ್ಥೈಸುತ್ತಾರೆ. ಸಮಾಜ ಶಾಸ್ತ್ರಕ್ಕೂ ಅರ್ಥಪೂರ್ಣ ವ್ಯಾಖ್ಯಾನ ಬರೆದ ಶ್ರೇಷ್ಠತೆ ಅವರದು. ಬಡಜನತೆಯನ್ನು ಕಡೆಗಣಿಸಿ, ಶ್ರೀಮಂತಿಕೆಗೆ ಮಣೆ ಹಾಕುವ ಸ್ವಭಾವದ ವ್ಯಕ್ತಿಗಳಿಗೆ ಪರಮಾತ್ಮ ಶಿಕ್ಷೆ ನೀಡದೇ ಬಿಡುವುದಿಲ್ಲ ಎಂಬ ಕಠಿಣ ನಿಲುವು ಅವರ ವಚನಗಳಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು. 'ಪ್ರಾಣ ಸಮಾನವಾದ ಪ್ರಜೆಗಳು ಬಂದರೆ ಗುರಿ ತೋರಣವ ಕಟ್ಟಿ ಸ್ವಾಗತಿಸಿ' ಎಂದು

ನುಡಿಯುವುದರ ಮೂಲಕ ಪ್ರಜಾಪ್ರತಿನಿಧಿ ಶೋಷಿತರ ಮತ್ತು ದುಃಖಿತರ ಧ್ವನಿಯಾಗಿರಬೇಕೆಂದು ಅವರು ಬಯಸಿದರು.

ಎನಗಿಂತ ಗಿರಿಯರಿಲ್ಲ;

**ಎನಗಿಂತ ಕಿರಿಯರಿಲ್ಲ,**
**ಶಿವಭಕ್ತರಿಗಿಂತ ಹಿರಿಯರಿಲ್ಲ;**
**ನಿಮ್ಮಪಾದ ಸಾಕ್ಷಿ, ಎನ್ನಮನ ಸಾಕ್ಷಿ !**
**ಕೂಡಲ ಸಂಗಮದೇವಾ**
**ಎನಗಿದೆ ದಿಬ್ಬ !**

ವ್ಯಕ್ತಿಗಿಂತ ಸಮಾಜ ದೊಡ್ಡದು ಎಂದು ಭಾವಿಸಿ, ಸಮಾಜದ ಹಿತಕ್ಕಾಗಿ ಸ್ವಹಿತ ಮರೆತು ಸೇವಕನಾಗಿ ಸಮಾಜದ ಕಲ್ಯಾಣಕ್ಕಾಗಿ ಪ್ರಜಾಪ್ರತಿನಿಧಿ ಶ್ರಮಿಸಬೇಕೆಂದು ಗುರು ಬಸವಣ್ಣನವರು ಬಯಸುತ್ತಾರೆ. 'ಜನಪ್ರತಿನಿಧಿ ಸದಾ ಪರಿಶುದ್ಧನಾಗಿರಬೇಕು. ಅನ್ಯಾಯ, ಅಕ್ರಮ, ದ್ವೇಷ ಮತ್ತು ಅಸೂಯೆಗಳಿಂದ ದೂರವಿರಬೇಕು. ಪರಮಾತ್ಮನನ್ನು ನಂಬಿ ನಾವು ಸದ್ಗುಣಿಯಾಗಿ ಸಮಾಜ ಸೇವೆ ಸಲ್ಲಿಸಬೇಕು' ಎಂಬ ಅವರ ನುಡಿಗಳು ಪ್ರಜಾಪ್ರತಿನಿಧಿಗಳಿಗೆ ಅವರು ನೀಡುವ ದಿವ್ಯ ಮಂತ್ರೋಪದೇಶಗಳಾಗಿವೆ. ನಮ್ಮ ಸಂವಿಧಾನ ಸಹ ಈ ಮೌಲ್ಯಗಳನ್ನೇ ಪ್ರತಿಪಾದಿಸಿರುವುದನ್ನು ಕಾಣಬಹುದು. ಮಹಾತ್ಮಾ ಗಾಂಧೀಜಿ ಕಂಡ ಸರ್ವೋದಯ ಕಲ್ಪನೆಯ ರಾಜ್ಯದ ಕನಸೂ ಸಹ ಇದೇ ಎನ್ನುವುದನ್ನು ನಾವು ಈ ಸಂದರ್ಭದಲ್ಲಿ ನೆನಪು ಮಾಡಿಕೊಳ್ಳಬೇಕು.

**ಲಂಚ ವಂಚನಕ್ಕೆ ಕೈಯಾನದ ಭಾಷೆ;**
**ಬಟ್ಟೆಯಲ್ಲಿ ಹೊನ್ನು ವಸ್ತ್ರಬಿದ್ದಿದ್ದಡೆ,**
**ಕೈಮುಟ್ಟಿ ಎತ್ತಿದೆನಾದಡೆ, ಅಯ್ಯಾ ನಿಮ್ಮಾಣೆ;**
**ನೀವಿಕ್ಕಿದ ಭಿಕ್ಷೆಯೊಳಗಿಪ್ಪೆನಯ್ಯಾ.**

ಅಂದು ಬಸವಣ್ಣನವರು ನಿರ್ಮಿಸಿದ ಮೌಲ್ಯಾಧಾರಿತ ಜೀವನ ಪದ್ಧತಿಯಲ್ಲಿ ಎಲ್ಲರೂ ನೀಡುವವರೇ ಆಗಿ ಬೇಡುವವರಿಲ್ಲದೇ ಬಡವನಾದ ? ಎನ್ನುವಂತಹ ಸಂಪೂರ್ಣ ಸಮೃದ್ಧಿ ಮತ್ತು ಸಂತೃಪ್ತಿ ತುಂಬಿದ ಕಲ್ಯಾಣ ಸಮಾಜ ನಿರ್ಮಾಣಗೊಂಡಿತ್ತು. ಶ್ರೀ ಸಾಮಾನ್ಯನಿಂದ ರಾಜ ಮಹಾರಾಜರುಗಳಾದ ಅಸಂಖ್ಯಾತ ಸಾಧಕರು ತಮ್ಮ ರಾಜಸೊತ್ತಿಗೆಗಳನ್ನು ತೊರೆದು ಜ್ಞಾನದಾಹಿಗಳಾಗಿ ಕಲ್ಯಾಣಕ್ಕೆ ಬಂದರು. ಅನುಭವ ಮಂಟಪದ ಸದಸ್ಯರಾದರು. ನಿತ್ಯ ಗಣಪರ್ವದ ಆಚರಣೆಯಲ್ಲಿ ಬದುಕಿನ ಸಾರ್ಥಕತೆಯನ್ನು ಸಹ ಕಂಡರು. ಇಂತಹ ಒಂದು ಮಹತ್ತ್ವಪೂರ್ಣ ಘಟನೆ ಜಗತ್ತಿನ ಇತಿಹಾಸದಲ್ಲಿಯೇ ಪ್ರಪ್ರಥಮವಾದದ್ದು. ಅಂತಹ ಒಂದು ಅರ್ಥಪೂರ್ಣ ಸಮಾಜವನ್ನು ನಿರ್ಮಿಸಿದ ಮಹಾನ್ ಶಿಲ್ಪಿಯಾಗಿ ಜಗತ್ತಿನ ಇತಿಹಾಸದ ಪುಟಗಳಲ್ಲಿ ಬಸವಣ್ಣನವರು ಕಂಗೊಳಿಸುತ್ತಿದ್ದಾರೆ.

* * *

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ **'ಸಿದ್ಧಗಂಗಾ'** ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ, ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ ನಗದು/**ಚೆಕ್**/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸವನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

**ಪ್ರಕಾಶಕರು,** 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322





# ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ

– ಎಚ್.ಎಸ್. ಸಿದ್ಧಗಂಗಪ್ಪ *

ಸಜ್ಜನಿಕೆ, ನಿಸ್ವಾರ್ಥ ವ್ಯಕ್ತಿತ್ವದಿಂದ ಜನರ ಪ್ರೀತಿ ವಿಶ್ವಾಸ, ಗೌರವಕ್ಕೆ ಪಾತ್ರರಾಗಿದ್ದವರು ಡಾ. ಫ.ಗು.ಹಳಕಟ್ಟಿಯವರು. ಪ್ರಖ್ಯಾತ ನ್ಯಾಯವಾದಿಗಳಾಗಿದ್ದರೂ, ಅವರು ವೃತ್ತಿಯಲ್ಲಿ ತೋರಿಸಿದ ನೈಪುಣ್ಯತೆ, ಸರಳತೆ, ಸತ್ಯ ನಿಷ್ಠುರತೆ ಹಾಗೂ ಕಾರ್ಯಕ್ಷಮತೆಗಳಿಂದ ಸರ್ಕಾರಿ ವಕೀಲರಾಗಿ, ಆ ಸ್ಥಾನಕ್ಕೆ ಘನತೆ, ಗೌರವವನ್ನು ತಂದುಕೊಟ್ಟರು. ಕ್ರಿಯಾಶೀಲತೆ, ಹಿಡಿದ ಕೆಲಸವನ್ನು ಮಾಡಿ ಮುಗಿಸಬೇಕೆನ್ನುವ ಇಚ್ಛಾಶಕ್ತಿ, ಬದ್ಧತೆ, ಸಾಮಾಜಿಕ ಕಳಕಳಿಯಿಂದ ಸಹಕಾರ ಹಾಗೂ ರಾಜಕೀಯ ಕ್ಷೇತ್ರದಲ್ಲಿ ತಮ್ಮ ಛಾಪನ್ನು ಮೂಡಿಸಿದರು. ಅಧ್ಯಯನಾಸಕ್ತಿಯಿಂದ ಶರಣ ಸಾಹಿತ್ಯಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಪ್ರಕಟಿಸುವಲ್ಲಿ ಅವರು ತೋರಿದ ಆಸಕ್ತಿ, ಉತ್ಸಾಹ, ಪರಿಶ್ರಮ, ಕಾಳಜಿಯಿಂದ ಶರಣ ಸಾಹಿತ್ಯ ಕ್ಷೇತ್ರಕ್ಕೆ ಬಹುದೊಡ್ಡ ಕೊಡುಗೆಯನ್ನು ನೀಡಿದರು. ಆಚಾರ್ಯ ಬಿ.ಎಂ.ಶ್ರೀ ಅವರಿಂದ **'ವಚನ ಪಿತಾಮಹ'** ಎಂಬ ಪ್ರಶಂಸೆಗೆ ಭಾಜನರಾದವರು.

**ಜನನ :**

ಜುಲೈ ೨, ೧೮೮೦ ರಂದು ಧಾರವಾಡದಲ್ಲಿ ಜನಿಸಿದರು. ತಂದೆ ಶರಣ ಗುರುಬಸಪ್ಪ, ತಾಯಿ ಶರಣೆ ದಾನಮ್ಮ, ತಂದೆ ತಾಯಿ ಪ್ರೀತಿಯಿಂದ ಇಟ್ಟ ಹೆಸರು ಹಳಕಟ್ಟಿ. ಹುಟ್ಟಿದ ಮೂರು ವರ್ಷದಲ್ಲೇ ತಾಯಿಯನ್ನು ಕಳೆದುಕೊಂಡು ಮಾತೃವಾತ್ಸಲ್ಯದಿಂದ ವಂಚಿತರಾದರು. ತಂದೆಯವರ ಆರೈಕೆಯಲ್ಲಿ ಭವಿಷ್ಯವನ್ನು ರೂಪಿಸಿಕೊಂಡರು. ಗುರುಬಸಪ್ಪನವರದು ಸಾರ್ವಜನಿಕ ವ್ಯಕ್ತಿತ್ವ. ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಕರ್ನಾಟಕ ವಿದ್ಯಾವರ್ಧಕ ಸಂಘಗಳಲ್ಲಿ ಸಕ್ರಿಯ ವಹಿಸುತ್ತಿದ್ದ ಇವರು ಲೇಖಕರಾಗಿಯೂ ಹೆಸರು ಮಾಡಿದ್ದರು.

**ಶಿಕ್ಷಣ :**

ಹಳಕಟ್ಟಿಯವರಿಗೆ ಸಾಹಿತ್ಯಾಸಕ್ತಿ ತಂದೆಯಿಂದ ಬಂದ ಬಳುವಳಿ. ಪ್ರೌಢಶಿಕ್ಷಣ ಧಾರವಾಡದಲ್ಲೇ ನಡೆಯಿತು. ಮುಂಬಯಿಯಲ್ಲಿ ಬಿ.ಎ. ವ್ಯಾಸಂಗ ಮಾಡಿದರು, ಕನ್ನಡವನ್ನು ಐಚ್ಛಿಕವಾಗಿ ಅಧ್ಯಯನ ಮಾಡಿದರು. ಕನ್ನಡ ಸ್ನಾತಕೋತ್ತರ ಪರೀಕ್ಷೆಗೆ ಅಧ್ಯಯನ ಮಾಡಿದರೂ ಅನಿವಾರ್ಯ ಕಾರಣಗಳಿಂದ ಪರೀಕ್ಷೆಯನ್ನು ತೆಗೆದುಕೊಳ್ಳಲಿಲ್ಲ. ಕಾನೂನು ಶಾಸ್ತ್ರವನ್ನು ಅಧ್ಯಯನ ಮಾಡಿ ೧೯೦೪ ರಲ್ಲಿ ಕಾನೂನು ಪದವಿಯನ್ನು ಪಡೆದರು. ಅವರು ಮುಂಬಯಿಯಲ್ಲಿ ಬಿ.ಎ. ವ್ಯಾಸಂಗ ಮಾಡಲು ಹೋದಾಗ ಮರಾಠಿ ಹಾಗೂ ಹಿಂದಿ ಭಾಷಾ ಸಾಹಿತ್ಯಗಳ ಮೇಲೆ ಅಲ್ಲಿನ ಜನರಿಗಿದ್ದ ಅಭಿಮಾನವನ್ನು ಕಂಡು ಹಳಕಟ್ಟಿಯವರ ಸ್ವಾಭಿಮಾನ ಕೆರಳಿಸಿತು. ಕನ್ನಡಿಗರಿಗೇಕೆ ಇಂತಹ ಸ್ವಾಭಿಮಾನ ಇಲ್ಲ ಎಂಬ ಪ್ರಶ್ನೆ ಅವರಲ್ಲಿ ಹುಟ್ಟಿ ತಮ್ಮನ್ನು ನಾಡು ಮತ್ತು ಭಾಷೆಯ ಅಭಿವೃದ್ಧಿಗೆ ತೊಡಗಿಸಿಕೊಳ್ಳಬೇಕೆಂಬ ದೃಢ ನಿರ್ಧಾರಕ್ಕೆ ಬಂದರು.

**ವೃತ್ತಿಜೀವನ :**

ವಕೀಲ ವೃತ್ತಿಯನ್ನು ವಿಜಾಪುರದಲ್ಲಿ ಆರಂಭಿಸಿದರು. ವಕೀಲ ವೃತ್ತಿಯಲ್ಲಿ ಪ್ರಾವೀಣ್ಯತೆಯನ್ನು ಸಾಧಿಸಿದ ಇವರನ್ನು ಸರ್ಕಾರ, ಸರ್ಕಾರದ ವಕೀಲರಾಗಿ ನೇಮಿಸಿತು. ಸರ್ಕಾರಿ ವಕೀಲರಾಗಿ ಅವರು ಕಾರ್ಯನಿಮಿತ್ತ ಅನೇಕ ಸ್ಥಳಗಳಿಗೆ ಹೋಗಿ ಬರಬೇಕಾಗಿತ್ತು. ವೃತ್ತಿಯಲ್ಲಿ ಸರ್ಕಾರಿ ವಕೀಲರಾಗಿದ್ದರೂ ಪ್ರವೃತ್ತಿಯಲ್ಲಿ ಅವರಲ್ಲಿನ ಸಾಹಿತ್ಯಾಸಕ್ತಿ ಪ್ರಜ್ವಲವಾಗಿತ್ತು. ಅವರು ಬನಹಟ್ಟಿಯಲ್ಲಿ ಅನಿವಾರ್ಯವಾಗಿ ಅಂದರೆ ಧಾರವಾಡದಲ್ಲಿ ಪ್ಲೇಗ್ ಹಾವಳಿ ತೀವ್ರವಾದುದರಿಂದ ತಮ್ಮ ಮಾವನವರಾದ ಚಿಕ್ಕೋಡಿ ತಮ್ಮಣ್ಣನವರಿದ್ದ ಬನಹಟ್ಟಿಯಲ್ಲಿರಬೇಕಾಯಿತು. ಆಗ ಅವರ ಬದುಕಿನಲ್ಲಿ ಮಹತ್ವದ ತಿರುವನ್ನು ತಂದಿತು. ಗ್ರಂಥಗಳನ್ನು ಕಾಣುವ ಹಾಗೂ ಅಧ್ಯಯನ ಮಾಡುವ ಅಪೂರ್ವ ಭಾಗ್ಯ ದೊರೆಯಿತು. ಅಲ್ಲಿ ಕಂಡಿದ್ದ ತಾಳೆಗರಿಗಳ ಕೃತಿಗಳನ್ನು ಹುಡುಕುವ ಕೆಲಸ ನಿರಂತರವಾಗಿತ್ತು. ಅವರಲ್ಲಿನ ಹೃದಯ

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧

ನುಡಿಯುವುದರ ಮೂಲಕ ಪ್ರಜಾಪ್ರತಿನಿಧಿ ಶೋಷಿತರ ಮತ್ತು ದುಃಖಿತರ ಧ್ವನಿಯಾಗಿರಬೇಕೆಂದು ಅವರು ಬಯಸಿದರು.

ಎನಗಿಂತ ಗಿರಿಯರಿಲ್ಲ;

**ಎನಗಿಂತ ಕಿರಿಯರಿಲ್ಲ,**
**ಶಿವಭಕ್ತರಿಗಿಂತ ಹಿರಿಯರಿಲ್ಲ;**
**ನಿಮ್ಮಪಾದ ಸಾಕ್ಷಿ, ಎನ್ನಮನ ಸಾಕ್ಷಿ !**
**ಕೂಡಲ ಸಂಗಮದೇವಾ**
**ಎನಗಿದೆ ದಿಬ್ಬ !**

ವ್ಯಕ್ತಿಗಿಂತ ಸಮಾಜ ದೊಡ್ಡದು ಎಂದು ಭಾವಿಸಿ, ಸಮಾಜದ ಹಿತಕ್ಕಾಗಿ ಸ್ವಹಿತ ಮರೆತು ಸೇವಕನಾಗಿ ಸಮಾಜದ ಕಲ್ಯಾಣಕ್ಕಾಗಿ ಪ್ರಜಾಪ್ರತಿನಿಧಿ ಶ್ರಮಿಸಬೇಕೆಂದು ಗುರು ಬಸವಣ್ಣನವರು ಬಯಸುತ್ತಾರೆ. 'ಜನಪ್ರತಿನಿಧಿ ಸದಾ ಪರಿಶುದ್ಧನಾಗಿರಬೇಕು. ಅನ್ಯಾಯ, ಅಕ್ರಮ, ದ್ವೇಷ ಮತ್ತು ಅಸೂಯೆಗಳಿಂದ ದೂರವಿರಬೇಕು. ಪರಮಾತ್ಮನನ್ನು ನಂಬಿ ನಾವು ಸದ್ಗುಣಿಯಾಗಿ ಸಮಾಜ ಸೇವೆ ಸಲ್ಲಿಸಬೇಕು' ಎಂಬ ಅವರ ನುಡಿಗಳು ಪ್ರಜಾಪ್ರತಿನಿಧಿಗಳಿಗೆ ಅವರು ನೀಡುವ ದಿವ್ಯ ಮಂತ್ರೋಪದೇಶಗಳಾಗಿವೆ. ನಮ್ಮ ಸಂವಿಧಾನ ಸಹ ಈ ಮೌಲ್ಯಗಳನ್ನೇ ಪ್ರತಿಪಾದಿಸಿರುವುದನ್ನು ಕಾಣಬಹುದು. ಮಹಾತ್ಮಾ ಗಾಂಧೀಜಿ ಕಂಡ ಸರ್ವೋದಯ ಕಲ್ಪನೆಯ ರಾಜ್ಯದ ಕನಸೂ ಸಹ ಇದೇ ಎನ್ನುವುದನ್ನು ನಾವು ಈ ಸಂದರ್ಭದಲ್ಲಿ ನೆನಪು ಮಾಡಿಕೊಳ್ಳಬೇಕು.

**ಲಂಚ ವಂಚನಕ್ಕೆ ಕೈಯಾನದ ಭಾಷೆ;**
**ಬಟ್ಟೆಯಲ್ಲಿ ಹೊನ್ನು ವಸ್ತ್ರಬಿದ್ದಿದ್ದಡೆ,**
**ಕೈಮುಟ್ಟಿ ಎತ್ತಿದೆನಾದಡೆ, ಅಯ್ಯಾ ನಿಮ್ಮಾಣೆ;**
**ನೀವಿಕ್ಕಿದ ಭಿಕ್ಷೆಯೊಳಗಿಪ್ಪೆನಯ್ಯಾ.**

ಅಂದು ಬಸವಣ್ಣನವರು ನಿರ್ಮಿಸಿದ ಮೌಲ್ಯಾಧಾರಿತ ಜೀವನ ಪದ್ಧತಿಯಲ್ಲಿ ಎಲ್ಲರೂ ನೀಡುವವರೇ ಆಗಿ ಬೇಡುವವರಿಲ್ಲದೇ ಬಡವನಾದೆ ? ಎನ್ನುವಂತಹ ಸಂಪೂರ್ಣ ಸಮೃದ್ಧಿ ಮತ್ತು ಸಂತೃಪ್ತಿ ತುಂಬಿದ ಕಲ್ಯಾಣ ಸಮಾಜ ನಿರ್ಮಾಣಗೊಂಡಿತ್ತು. ಶ್ರೀ ಸಾಮಾನ್ಯನಿಂದ ರಾಜ ಮಹಾರಾಜರುಗಳಾದ ಅಸಂಖ್ಯಾತ ಸಾಧಕರು ತಮ್ಮ ರಾಜಸೂತ್ತಿಗೆಗಳನ್ನು ತೊರೆದು ಜ್ಞಾನದಾಹಿಗಳಾಗಿ ಕಲ್ಯಾಣಕ್ಕೆ ಬಂದರು. ಅನುಭವ ಮಂಟಪದ ಸದಸ್ಯರಾದರು. ನಿತ್ಯ ಗಣಪರ್ವದ ಆಚರಣೆಯಲ್ಲಿ ಬದುಕಿನ ಸಾರ್ಥಕತೆಯನ್ನು ಸಹ ಕಂಡರು. ಇಂತಹ ಒಂದು ಮಹತ್ವಪೂರ್ಣ ಘಟನೆ ಜಗತ್ತಿನ ಇತಿಹಾಸದಲ್ಲಿಯೇ ಪ್ರಪ್ರಥಮವಾದದ್ದು. ಅಂತಹ ಒಂದು ಅರ್ಥಪೂರ್ಣ ಸಮಾಜವನ್ನು ನಿರ್ಮಿಸಿದ ಮಹಾನ್ ಶಿಲ್ಪಿಯಾಗಿ ಜಗತ್ತಿನ ಇತಿಹಾಸದ ಪುಟಗಳಲ್ಲಿ ಬಸವಣ್ಣನವರು ಕಂಗೊಳಿಸುತ್ತಿದ್ದಾರೆ.

* * *

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ, ಇಷ್ಟು ಕನಿಷ್ಟ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೭ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ ನಗದು/ **ಚೆಕ್**/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸವನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

**ಪ್ರಕಾಶಕರು,** 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322





# ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ

– ಎಚ್.ಎಸ್. ಸಿದ್ಧಗಂಗಪ್ಪ *

ಸಜ್ಜನಿಕೆ, ನಿಸ್ವಾರ್ಥ ವ್ಯಕ್ತಿತ್ವದಿಂದ ಜನರ ಪ್ರೀತಿ ವಿಶ್ವಾಸ, ಗೌರವಕ್ಕೆ ಪಾತ್ರರಾಗಿದ್ದವರು ಡಾ. ಫ.ಗು.ಹಳಕಟ್ಟಿಯವರು. ಪ್ರಖ್ಯಾತ ನ್ಯಾಯವಾದಿಗಳಾಗಿದ್ದರೂ, ಅವರು ವೃತ್ತಿಯಲ್ಲಿ ತೋರಿಸಿದ ನೈಪುಣ್ಯತೆ, ಸರಳತೆ, ಸತ್ಯ ನಿಷ್ಠುರತೆ ಹಾಗೂ ಕಾರ್ಯಕ್ಷಮತೆಗಳಿಂದ ಸರ್ಕಾರಿ ವಕೀಲರಾಗಿ, ಆ ಸ್ಥಾನಕ್ಕೆ ಘನತೆ, ಗೌರವವನ್ನು ತಂದುಕೊಟ್ಟರು. ಕ್ರಿಯಾಶೀಲತೆ, ಹಿಡಿದ ಕೆಲಸವನ್ನು ಮಾಡಿ ಮುಗಿಸಬೇಕೆನ್ನುವ ಇಚ್ಛಾಶಕ್ತಿ, ಬದ್ಧತೆ, ಸಾಮಾಜಿಕ ಕಳಕಳಿಯಿಂದ ಸಹಕಾರ ಹಾಗೂ ರಾಜಕೀಯ ಕ್ಷೇತ್ರದಲ್ಲಿ ತಮ್ಮ ಛಾಪನ್ನು ಮೂಡಿಸಿದರು. ಅಧ್ಯಯನಾಸಕ್ತಿಯಿಂದ ಶರಣ ಸಾಹಿತ್ಯಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಪ್ರಕಟಿಸುವಲ್ಲಿ ಅವರು ತೋರಿದ ಆಸಕ್ತಿ, ಉತ್ಸಾಹ, ಪರಿಶ್ರಮ, ಕಾಳಜಿಯಿಂದ ಶರಣ ಸಾಹಿತ್ಯ ಕ್ಷೇತ್ರಕ್ಕೆ ಬಹುದೊಡ್ಡ ಕೊಡುಗೆಯನ್ನು ನೀಡಿದರು. ಆಚಾರ್ಯ ಬಿ.ಎಂ.ಶ್ರೀ ಅವರಿಂದ **'ವಚನ ಪಿತಾಮಹ'** ಎಂಬ ಪ್ರಶಂಸೆಗೆ ಭಾಜನರಾದವರು.

**ಜನನ :**

ಜುಲೈ ೨, ೧೮೮೦ ರಂದು ಧಾರವಾಡದಲ್ಲಿ ಜನಿಸಿದರು. ತಂದೆ ಶರಣ ಗುರುಬಸಪ್ಪ, ತಾಯಿ ಶರಣೆ ದಾನಮ್ಮ, ತಂದೆ ತಾಯಿ ಪ್ರೀತಿಯಿಂದ ಇಟ್ಟ ಹೆಸರು ಹಳಕಟ್ಟಿ, ಹುಟ್ಟಿದ ಮೂರು ವರ್ಷದಲ್ಲೇ ತಾಯಿಯನ್ನು ಕಳೆದುಕೊಂಡು ಮಾತೃವಾತ್ಸಲ್ಯದಿಂದ ವಂಚಿತರಾದರು. ತಂದೆಯವರ ಆರೈಕೆಯಲ್ಲಿ ಭವಿಷ್ಯವನ್ನು ರೂಪಿಸಿಕೊಂಡರು. ಗುರುಬಸಪ್ಪನವರದು ಸಾರ್ವಜನಿಕ ವ್ಯಕ್ತಿತ್ವ. ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಕರ್ನಾಟಕ ವಿದ್ಯಾವರ್ಧಕ ಸಂಘಗಳಲ್ಲಿ ಸಕ್ರಿಯ ವಹಿಸುತ್ತಿದ್ದ ಇವರು ಲೇಖಕರಾಗಿಯೂ ಹೆಸರು ಮಾಡಿದ್ದರು.

**ಶಿಕ್ಷಣ :**

ಹಳಕಟ್ಟಿಯವರಿಗೆ ಸಾಹಿತ್ಯಾಸಕ್ತಿ ತಂದೆಯಿಂದ ಬಂದ ಬಳುವಳಿ. ಪ್ರೌಢಶಿಕ್ಷಣ ಧಾರವಾಡದಲ್ಲೇ ನಡೆಯಿತು. ಮುಂಬಯಿಯಲ್ಲಿ ಬಿ.ಎ. ವ್ಯಾಸಂಗ ಮಾಡಿದರು, ಕನ್ನಡವನ್ನು ಐಚ್ಛಿಕವಾಗಿ ಅಧ್ಯಯನ ಮಾಡಿದರು. ಕನ್ನಡ ಸ್ನಾತಕೋತ್ತರ ಪರೀಕ್ಷೆಗೆ ಅಧ್ಯಯನ ಮಾಡಿದರೂ ಅನಿವಾರ್ಯ ಕಾರಣಗಳಿಂದ ಪರೀಕ್ಷೆಯನ್ನು ತೆಗೆದುಕೊಳ್ಳಲಿಲ್ಲ. ಕಾನೂನು ಶಾಸ್ತ್ರವನ್ನು ಅಧ್ಯಯನ ಮಾಡಿ ೧೯೦೪ ರಲ್ಲಿ ಕಾನೂನು ಪದವಿಯನ್ನು ಪಡೆದರು. ಅವರು ಮುಂಬಯಿಯಲ್ಲಿ ಬಿ.ಎ. ವ್ಯಾಸಂಗ ಮಾಡಲು ಹೋದಾಗ ಮರಾಠಿ ಹಾಗೂ ಹಿಂದಿ ಭಾಷಾ ಸಾಹಿತ್ಯಗಳ ಮೇಲೆ ಅಲ್ಲಿನ ಜನರಿಗಿದ್ದ ಅಭಿಮಾನವನ್ನು ಕಂಡು ಹಳಕಟ್ಟಿಯವರ ಸ್ವಾಭಿಮಾನ ಕೆರಳಿಸಿತು. ಕನ್ನಡಿಗರಿಗೇಕೆ ಇಂತಹ ಸ್ವಾಭಿಮಾನ ಇಲ್ಲ ಎಂಬ ಪ್ರಶ್ನೆ ಅವರಲ್ಲಿ ಹುಟ್ಟಿ ತಮ್ಮನ್ನು ನಾಡು ಮತ್ತು ಭಾಷೆಯ ಅಭಿವೃದ್ಧಿಗೆ ತೊಡಗಿಸಿಕೊಳ್ಳಬೇಕೆಂಬ ದೃಢ ನಿರ್ಧಾರಕ್ಕೆ ಬಂದರು.

**ವೃತ್ತಿಜೀವನ :**

ವಕೀಲ ವೃತ್ತಿಯನ್ನು ವಿಜಾಪುರದಲ್ಲಿ ಆರಂಭಿಸಿದರು. ವಕೀಲ ವೃತ್ತಿಯಲ್ಲಿ ಪ್ರಾವೀಣ್ಯತೆಯನ್ನು ಸಾಧಿಸಿದ ಇವರನ್ನು ಸರ್ಕಾರ, ಸರ್ಕಾರದ ವಕೀಲರಾಗಿ ನೇಮಿಸಿತು. ಸರ್ಕಾರಿ ವಕೀಲರಾಗಿ ಅವರು ಕಾರ್ಯನಿಮಿತ್ತ ಅನೇಕ ಸ್ಥಳಗಳಿಗೆ ಹೋಗಿ ಬರಬೇಕಾಗಿತ್ತು. ವೃತ್ತಿಯಲ್ಲಿ ಸರ್ಕಾರಿ ವಕೀಲರಾಗಿದ್ದರೂ ಪ್ರವೃತ್ತಿಯಲ್ಲಿ ಅವರಲ್ಲಿನ ಸಾಹಿತ್ಯಾಸಕ್ತಿ ಪ್ರಜ್ವಲವಾಗಿತ್ತು. ಅವರು ಬನಹಟ್ಟಿಯಲ್ಲಿ ಅನಿವಾರ್ಯವಾಗಿ ಅಂದರೆ ಧಾರವಾಡದಲ್ಲಿ ಪ್ಲೇಗ್ ಹಾವಳಿ ತೀವ್ರವಾದುದರಿಂದ ತಮ್ಮ ಮಾವನವರಾದ ಚಿಕ್ಕೋಡಿ ತಮ್ಮಣ್ಣನವರಿದ್ದ ಬನಹಟ್ಟಿಯಲ್ಲಿರಬೇಕಾಯಿತು. ಆಗ ಅವರ ಬದುಕಿನಲ್ಲಿ ಮಹತ್ವದ ತಿರುವನ್ನು ತಂದಿತು. ಗ್ರಂಥಗಳನ್ನು ಕಾಣುವ ಹಾಗೂ ಅಧ್ಯಯನ ಮಾಡುವ ಅಪೂರ್ವ ಭಾಗ್ಯ ದೊರೆಯಿತು. ಅಲ್ಲಿ ಕಂಡಿದ್ದ ತಾಳೆಗರಿಗಳ ಕೃತಿಗಳನ್ನು ಹುಡುಕುವ ಕೆಲಸ ನಿರಂತರವಾಗಿತ್ತು. ಅವರಲ್ಲಿನ ಹೃದಯ

*೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧




ಶ್ರೀಮಂತಿಕೆಯಿಂದ ಜನರ ಆದರ ಅಭಿಮಾನಗಳಿಗೆ ಪಾತ್ರರಾದ ಕಾರಣ ವಿಜಾಪುರ ನಗರಪಾಲಿಕೆ ಅಧ್ಯಕ್ಷರಾಗುವ ಸುಯೋಗ ತಾನಾಗಿಯೇ ಒದಗಿ ಬಂತು.

ಅವಕಾಶ ದೊರೆತಾಗ ಸಮಾಜಕ್ಕೆ ತಮ್ಮಿಂದಾಗುವ ಸೇವೆಯನ್ನು ಪ್ರಾಮಾಣಿಕತೆಯಿಂದ ಮಾಡಿದರು. ವಕೀಲ ವೃತ್ತಿಯನ್ನು ಆರಂಭಿಸಿದ ಆರು ವರ್ಷಗಳಲ್ಲಿ ಅಂದರೆ ೧೯೧೦ರಲ್ಲಿ ನಾಡಿನ ಪ್ರಸಿದ್ಧ ಶಿಕ್ಷಣ ಸಂಸ್ಥೆಗಳಲ್ಲಿ ಒಂದಾದ ಬಿ.ಎಲ್.ಡಿ.ಇ. ಸಂಸ್ಥೆಯನ್ನು ಪ್ರಾರಂಭಿಸುವುದರ ಮೂಲಕ ಶಿಕ್ಷಣ ಕ್ರಾಂತಿಗೆ ಬೀಜಾಂಕುರ ಹಾಕಿದರು. ಅವರು ಅಂದು ನೆಟ್ಟ ಸಸಿ ಇಂದು ಬೃಹತ್ ಮರವಾಗಿ ಬೆಳೆದು ಸಾವಿರಾರು ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸುವ ಶಿಕ್ಷಣ ಕೇಂದ್ರವಾಗಿ, ನೂರಾರು ಕುಟುಂಬಗಳಿಗೆ ಆಶ್ರಯ ನೀಡುವಂತಾಗಿದೆ. ೧೯೧೨ ರಲ್ಲಿ ಸಿದ್ದೇಶ್ವರ ಸಂಸ್ಥೆ, ೧೯೧೩ ರಲ್ಲಿ ಸಹಕಾರಿ ಸಂಘ, ೧೯೧೪ ರಲ್ಲಿ ಸಿದ್ಧೇಶ್ವರ ಪ್ರೌಢಶಾಲೆಯನ್ನು ಸ್ಥಾಪಿಸಿದರು. ಬಿಜಾಪುರದ ಅಂದಿನ ನೀರಿನ ಸಮಸ್ಯೆಯನ್ನು ಬ್ಯಾತನಾಳ ಕೆರೆಯ ನೀರನ್ನು ಒದಗಿಸುವ ಮೂಲಕ ಬಗೆಹರಿಸಿದರು. ಜನರ ಪ್ರೀತಿಯ ಒತ್ತಾಯಕ್ಕೆ ಕಟ್ಟುಬಿದ್ದು ವಿಜಾಪುರ ಜಿಲ್ಲಾ ಕಾಂಗ್ರೆಸ್ ಕಮಿಟಿ ಕಾರ್ಯದರ್ಶಿಯಾಗಿ, ೧೯೨೦ರಲ್ಲಿ ಮುಂಬೈ ವಿಧಾನಸಭೆಯ ಸದಸ್ಯರಾಗಿ ಸೇವೆ ಸಲ್ಲಿಸುವ ಸದಾವಕಾಶ ದೊರೆಯಿತು.

ರಾಜಕೀಯ ಕ್ಷೇತ್ರದಲ್ಲಿ ತೊಡಗಿಸಿಕೊಂಡಿದ್ದರಿಂದ ತಮ್ಮಲ್ಲಿ ಮನೆಮಾಡಿಕೊಂಡಿದ್ದ ಸಾಹಿತ್ಯದ ಕಡೆಗಿನ ಒಲವಿಗೆ ಎಲ್ಲಿ ಅಡ್ಡಿಯಾಗುವುದೋ ಎಂಬ ಆತಂಕ ಅವರನ್ನು ಸದಾ ಕಾಡುತ್ತಿತ್ತು. ೧೯೨೪ ಅವರ ಬದುಕಿನಲ್ಲಿ ಒಂದು ಸಂಕ್ರಮಣ ಕಾಲವೆಂದೇ ಹೇಳಬೇಕು. ವಿಧಾನ ಪರಿಷತ್ ಸದಸ್ಯತ್ವಕ್ಕೆ ಮತ್ತೆ ನಿಲ್ಲಬೇಕೆಂದು ಒತ್ತಾಯ ಬಂದರೂ ಅವರು ಮಾಡಿದ್ದು "ರಾಜಕೀಯ ರಂಗದ ಮಾಯಾಲೋಕದ ಮೋಹಗಳು ನನ್ನನ್ನು ಮತ್ತು ನನ್ನ ಸಮಾಜ ಸೇವೆಯ ಗುರಿಯನ್ನೇ ಕಿತ್ತು ಹಾಕಬಹುದೆಂಬ ಅಂಜಿಕೆಯಿಂದ ನಾನು ಮರುಚುನಾವಣೆಗೆ ಎಷ್ಟೇ ಒತ್ತಡ ಬಂದರೂ ಸ್ಪರ್ಧಿಸದೆ ರಾಜಕೀಯದಿಂದ ದೂರ ಉಳಿದೆ" ಎಂಬ ಮಾತು ಶರಣ ಸಾಹಿತ್ಯದ ಬಗ್ಗೆ ಅವರಿಗಿದ್ದ ಆಸ್ತಿಕೆಯ ದ್ಯೋತಕ.

ಅವರೇ ಹೇಳಿಕೊಂಡಂತೆ ರಾಜಕೀಯದಿಂದ ದೂರ ಉಳಿದು ವಿದ್ಯಾರ್ಥಿ ದೆಸೆಯಿಂದಲೂ ತಮ್ಮ ಮನಸ್ಸನ್ನು ಆಕರ್ಷಿಸಿದ್ದ ವಚನ ಸಾಹಿತ್ಯವನ್ನು ಎಷ್ಟೇ ಕಷ್ಟವಾದರೂ ದೃಢ ನಿಶ್ಚಯದಿಂದ ಹಿಂದೆ ಸರಿಯದೆ ವಚನ ಸಾಹಿತ್ಯವನ್ನು ಎಷ್ಟೇ ಶ್ರಮವಾದರೂ ಸರಿಯೇ ಸಂಪಾದಿಸಿ ವ್ಯವಸ್ಥಿತವಾಗಿ ಪ್ರಕಟಿಸುವ ಸಾಹಸಕ್ಕೆ ಕೈ ಹಾಕಿದರು.

ಶಿಸ್ತು, ಶ್ರದ್ಧೆ, ಮಾಡುವ ಕೆಲಸದಲ್ಲಿ ನಿಷ್ಠೆ ಅವರ ಜೀವನದಲ್ಲಿ ಅಳವಡಿಸಿಕೊಂಡ ಆದರ್ಶ ಮೌಲ್ಯಗಳಾಗಿದ್ದವು. ಅವರು ಯಾವುದೇ ಕೃತಿಯನ್ನು ಓದಲಿ, ಟಿಪ್ಪಣಿ ಮಾಡಿಕೊಳ್ಳುವ ಮೂಲಕ ಆಕರ ಗ್ರಂಥಗಳನ್ನು ನೋಡುವ ಶಿಸ್ತಿನಿಂದ ಕೂಡಿದ್ದ ಹಳಕಟ್ಟಿಯವರ ಅಧ್ಯಯನ ಕ್ರಮ ವಿದ್ಯಾರ್ಥಿ ದೆಸೆಯಿಂದ ಹಿಡಿದು ಜೀವನದ ಕೊನೆಯವರೆಗೂ ಉಳಿಸಿಕೊಂಡು ಬಂದು ಮುಂದುವರಿದಿದ್ದು ಕನ್ನಡದ ಪುಣ್ಯ. ಅನೇಕ ಗ್ರಂಥಗಳನ್ನು ಆಳವಾಗಿ ಅಧ್ಯಯನ ಮಾಡಿ ಟಿಪ್ಪಣಿ ಮಾಡಿಕೊಂಡರು. ಶಿವಾಧಿಕ್ಯ ಪುರಾಣವಂತೂ ಅವರ ಮನಸ್ಸನ್ನು ಸೂರೆಗೊಂಡಿತು. ಭಕ್ತನಾದವನು ಹೊಲೆಯ ನಾದರೂ ಅವನನ್ನು ಸರಿಸಮಾನಾಚರಣೆಯಿಂದ ನಡೆದುಕೊಳ್ಳಬೇಕೆಂಬ ಆ ಕೃತಿಯ ನಿಲುವು ಅವರ ಮನಸ್ಸನ್ನು ಗೆದ್ದಿತು. ವಚನ ಸಾಹಿತ್ಯವನ್ನು ಕುರಿತಂತೆ ವಿಶೇಷ ಶ್ರದ್ಧೆ ಹುಟ್ಟಿಕೊಂಡಿತು.

ಅವರ ಶರಣ ಸಾಹಿತ್ಯಕ್ಕೆ ಸಂಬಂಧಿಸಿದ ಅಧ್ಯಯನವನ್ನು ತಪಸ್ಸಿನಂತೆ ಕೈಗೊಂಡರು. ತಾಳೆಗರಿಗಳಲ್ಲಿ ಅಡಕವಾಗಿದ್ದ ವಚನ ಸಾಹಿತ್ಯ ಸಂಗ್ರಹಕ್ಕಾಗಿ ಅವರು ಮಾಡಿದ ಸಾಹಸಪೂರ್ಣ ಕಾರ್ಯ ಈಗ ಇತಿಹಾಸ. ತಾಳೆಗರಿಗಳು ಸಿಕ್ಕಲ್ಲಿ ಅವುಗಳನ್ನು ಸಂಗ್ರಹಿಸಿ ತಂದರು. ಬೆಲೆ ಕೊಟ್ಟು ತಂದರು, ಕೆಲವರು ಅವರ ಮೇಲಿನ ಪ್ರೀತಿ, ಗೌರವದಿಂದ ಕೊಟ್ಟರು. ಅವರು ತಮ್ಮ ಬದುಕನ್ನು ವಚನ ಸಾಹಿತ್ಯ ಸಂಗ್ರಹ,





ಅಧ್ಯಯನ ಪ್ರಕಟಣೆಗೆ ಮೀಸಲಾಗಿಟ್ಟರು. ಶ್ರೀಶೈಲ, ಮುದನೂರು, ಮಂಗಳವಾಡ, ಮುದಗಲ್ಲು, ಪೊಟ್ಟಿಲಕೆರೆ, ಕೊಲ್ಲಿಪಾಕಿ, ಮುರಗೋಡು ಮೊದಲಾದ ಕ್ಷೇತ್ರಗಳನ್ನು ಸುತ್ತಿ ಹಸ್ತಪ್ರತಿಗಳನ್ನು ಸಂಗ್ರಹಿಸಿದರು.

ಹಳಕಟ್ಟಿಯವರು ತಾವು ಶ್ರಮಪಟ್ಟು ಸಂಗ್ರಹಿಸಿ ತಂದ ಹಸ್ತಪ್ರತಿಗಳನ್ನು ಒಂದು ಕಡೆ ಪೇರಿಸಿಡಲಿಲ್ಲ. ಅವುಗಳೆಲ್ಲವನ್ನು ಶ್ರದ್ಧೆಯಿಂದ ಅಧ್ಯಯನ ಮಾಡಿ ವ್ಯವಸ್ಥಿತವಾಗಿ ವಿಂಗಡಿಸಿ ಪಟ್ಟಿ ಮಾಡಿದರು, ಅವರಲ್ಲಿನ ಅಸಾಮಾನ್ಯವಾದ ತಾಳ್ಮೆ ಮತ್ತು ತಪಸ್ಸಿನಂಥ ಅಧ್ಯಯನ ಶಿಸ್ತಿನ ಕಾರ್ಯವಾಗಿತ್ತು. ವಚನಕಾರನೊಬ್ಬನ ವಚನಗಳು ಒಂದೇ ಕಟ್ಟಿನಲ್ಲಿರುತ್ತಿರಲಿಲ್ಲ. ಅವುಗಳನ್ನು ಬೇರೆ ಬೇರೆ ಕಟ್ಟುಗಳಿಂದ ಸಂಗ್ರಹಿಸಿ ವ್ಯವಸ್ಥಿತಗೊಳಿಸಬೇಕಾಗಿತ್ತು. ಎಲ್ಲಕ್ಕೂ ಮೂಲ ತಾಳೆಗರಿಗಳ ಹಸ್ತಪ್ರತಿಗಳನ್ನು ಓದುವ ಕ್ಷಮತೆ ಪಡೆಯಬೇಕಾಗಿತ್ತು. ಈ ಎಲ್ಲ ಸಾಹಸ, ಅಧ್ಯಯನಶೀಲತೆ, ಶಿಸ್ತು, ಶ್ರಮ ಮತ್ತು ವ್ಯವಸ್ಥಾಕ್ರಮಗಳನ್ನು ಬಳಸಿ ಅವರು ಹಸ್ತಪ್ರತಿಗಳನ್ನು ಎರಡು ಭಾಗಗಳಾಗಿ ಮಾಡಿಕೊಂಡರು. ಒಂದು ವಚನಗಳಿಗೆ ಸಂಬಂಧಿಸಿದ ಸಂಕಲನ, ವಚನಗಳನ್ನೆಲ್ಲ ಒಟ್ಟುಗೂಡಿಸಿ ಅದನ್ನು ವಚನ ಶಾಸ್ತ್ರ ಎಂದು ಕರೆದು ಮೂರು ಸಂಪುಟಗಳಾಗುವಂತೆ ವ್ಯವಸ್ಥೆ ಮಾಡಿದರು. ಹಾಗೆಯೇ ಎರಡನೆಯದಾಗಿ ಗೂಳೂರು ಸಿದ್ಧವೀರಣ್ಣನ ಶೂನ್ಯ ಸಂಪಾದನೆ, ಹರಿಹರನ ರಗಳೆಗಳು, ಮತ್ತಿತರ ಹದಿನೇಳಕ್ಕೂ ಹೆಚ್ಚು ಕೃತಿಗಳನ್ನು ಹಳಕಟ್ಟಿಯವರು ಸಂಪಾದಿಸಿ ಪ್ರಕಟಿಸಿದರು.

ಹಳಕಟ್ಟಿಯವರು ಬಸವಣ್ಣನವರ ವಚನಗಳ ಸೊಗಸನ್ನು ಅನ್ಯಭಾಷಿಕರಿಗೆ ಪರಿಚಯ ಮಾಡಿಕೊಡುವ ದೃಷ್ಟಿಯಿಂದ Indian Antiquity ಗೆ ಅನುವಾದದ ವಚನಗಳನ್ನು ೧೯೨೨ ರಲ್ಲಿ ಪ್ರಕಟಿಸಿದರು. ನಂತರ ೧೯೨೩ ರಲ್ಲಿ 'ವಚನಶಾಸ್ತ್ರಸಾರ' ಹೆಸರಿನ ಬೃಹತ್ ವಚನ ಸಂಕಲನವನ್ನು ಬೆಳಕಿಗೆ ತರುವ ಮೂಲಕ ವಚನ ಸಾಹಿತ್ಯ ಪ್ರಕಟಣೆಯ ಕ್ಷೇತ್ರದಲ್ಲಿ ಪ್ರಜ್ವಲಿಸುವ ಬೆಳಕಾಗಿ ಕಾಣಿಸಿಕೊಂಡರು. ಬಸವಣ್ಣನವರ ವಚನಗಳನ್ನು ಎಲ್ಲಾ ಸಂಗೀತಗಾರರಿಂದ ಹಾಡಿಸಿ, ಅಂದಿನ ಪ್ರಸಿದ್ಧ ಧ್ವನಿ ಮುದ್ರಣ ಸಂಸ್ಥೆಯಾದ ಹೆಚ್.ಎಂ.ವಿ.ಯಲ್ಲಿ ಅವುಗಳನ್ನು ಧ್ವನಿಮುದ್ರಣ ಮಾಡಿಸಿದರು. ೧೯೨೧ ರಲ್ಲಿ ಸಾಹಿತ್ಯ ಸಮ್ಮೇಳನದಲ್ಲಿ ವಚನಗಳ ವ್ಯಾಖ್ಯಾನ ಮಾಡಿದರು. ವಚನ ವಾಙ್ಮಯವೇ ಅವರ ಬದುಕನ್ನು ತುಂಬಿಕೊಂಡಂತೆ ಇದ್ದರು.

ಹಳಕಟ್ಟಿಯವರು ಸಂಪಾದಿಸಿದ್ದ ವಚನಗಳ ವೈಶಿಷ್ಟಗಳ ಬಗ್ಗೆ ಕೇಳಿದ್ದ ಹಾನಗಲ್ಲ ಕುಮಾರಸ್ವಾಮಿಗಳು ಇವರಿಂದ ವಚನಗಳನ್ನು ಓದಿಸಿ ಮಾರುಹೋದುದೇ ಅಲ್ಲದೆ ಇವುಗಳ ಪ್ರಕಟಣೆಗಾಗಿ ೫೦೦ ರೂ.ಗಳನ್ನು (ಆಗಿನ ಕಾಲದಲ್ಲಿ ಅದು ದೊಡ್ಡ ಮೊತ್ತ) ದೇಣಿಗೆ ಬರುವಂತೆ ಮಾಡಿದರು. ಹಳಕಟ್ಟಿಯವರು ಅದನ್ನು ಮುಂಗಡವಾಗಿ ಮಂಗಳೂರಿನ ಬಾಸೆಲ್ ಮಿಷನ್ ಪ್ರೆಸ್‌ಗೆ ಕೊಟ್ಟು ವಚನಶಾಸ್ತ್ರಸಾರ ಪ್ರಥಮ ಸಂಪುಟವನ್ನು ಮುದ್ರಣಕ್ಕಾಗಿ ಕಳುಹಿಸಿದರು. ಆದರೆ ಮುದ್ರಣಾಲಯದವರು ತಮ್ಮ ಧರ್ಮ ಪ್ರಚಾರಕ್ಕೆ ಅಡ್ಡಿಬರುತ್ತದೆಂಬ ಕಾರಣದಿಂದ ಮುಂಗಡ ಹಣ ಹಾಗೂ ಹಸ್ತಪ್ರತಿಯನ್ನು ಹಿಂತಿರುಗಿಸಿದರು.

ಈಗಾಗಲೇ ತಿಳಿಸಿದಂತೆ ಹಳಕಟ್ಟಿಯವರು ಮುಂದೆ ಇಟ್ಟ ಹೆಜ್ಜೆಯನ್ನು ಹಿಂದಕ್ಕಿಟ್ಟವರಲ್ಲ. ಅವರಲ್ಲಿನ ಇಚ್ಛಾಶಕ್ತಿ ಪ್ರಬಲವಾಗಿತ್ತು. ಅವರು ಆ ಮೊದಲ ಸಂಪುಟವನ್ನು ಬೇರೆ ಮುದ್ರಣಾಲಯದಲ್ಲಿ ಮುದ್ರಣ ಮಾಡಿಸಿ ಪ್ರಕಟಿಸಿದರು. ಸಂಪುಟಗಳ ಪ್ರಕಟಣೆಗಾಗಿ ತಮ್ಮ ಸ್ವಂತ ಮನೆಯನ್ನು ಮಾರಿ 'ಹಿತಚಿಂತಕ' ಮುದ್ರಣಾಲಯವನ್ನು ಸ್ಥಾಪಿಸಿದರು. ಅದನ್ನು ವಾಣಿಜ್ಯೋದ್ಯಮಕ್ಕೆ ಬಳಸಿಕೊಳ್ಳದೆ ತಾವು ಅದುವರೆಗೆ ಸಂಗ್ರಹಿಸಿದ್ದ ಹಸ್ತಪ್ರತಿಗಳನ್ನು ಪ್ರಕಟಣೆ ಮಾಡಲು ಮುಂದಾದರು. ಹಸ್ತಪ್ರತಿಗಳ ಪ್ರಕಟಣೆಗೆಂದೆ 'ಶಿವಾನುಭವ' ಪತ್ರಿಕೆಯನ್ನು ೧೯೨೬ ರಲ್ಲಿ ಪ್ರಾರಂಭಿಸಿದರು.

ಪತ್ರಿಕೆ ನಡೆಸಲು ಆರ್ಥಿಕವಾಗಿ ತೊಂದರೆಯಾದಾಗ ಹಿಂದೆ ಮುಂದೆ ನೋಡದೆ ತಮ್ಮ ಚಿನ್ನದ ಕರಡಿಗೆಯನ್ನು ಮಾರಿದರು. ಅವರು ಸಂಗ್ರಹಿಸಿದ್ದ ವಚನಗಳು, ರಗಳೆಗಳು ಮೊದಲಾದ ಕೃತಿಗಳನ್ನು ಪ್ರಕಟಿಸಿದ ನಂತರ ಉಳಿದ ಕೃತಿಗಳ ಪ್ರಕಟಣೆಗಳನ್ನು ವ್ಯವಸ್ಥಿತವಾಗಿ ಜೋಡಿಸಿ ಗ್ರಂಥ ರೂಪದಲ್ಲಿ ಪ್ರಕಟಿಸಿದ ಅವರ ಪದ್ಧತಿ ವಿಶೇಷವಾದುದು. ಅವರು ಬಸವಣ್ಣ, ಅಂಬಿಗರ ಚೌಡಯ್ಯ, ದೇವರ ದಾಸಿಮಯ್ಯ, ಪ್ರಭುದೇವರು, ಅರಿವಿನ ಮಾರಿತಂದೆ, ಮಡಿವಾಳ ಮಾಚಿದೇವ, ಉರಿಲಿಂಗಪೆದ್ದಿ, ಮಹಾದೇವಿಯಕ್ಕ, ಲಿಂಗಮ್ಮ ಮೊದಲಾದವರ ವಚನಗಳನ್ನು ಬೇರೆ ಬೇರೆ ಸರಣಿಯಲ್ಲಿ ಭಾಗ ಭಾಗವಾಗಿ ಪ್ರಕಟವಾಗಿ ಮತ್ತೆ ಅವುಗಳನ್ನೆಲ್ಲಾ ಪ್ರತ್ಯೇಕಿಸಿ ಗ್ರಂಥಗಳ ರೂಪದಲ್ಲಿ ಅವರು ಪ್ರಕಟಮಾಡಿದರು. ಶಿವಶರಣರನ್ನು ಕುರಿತ ಚರಿತ್ರೆಯ ಮೂರು ಭಾಗಗಳು, ಶಿವಶರಣೆಯರ ಚರಿತ್ರೆಯ ಒಂದು ಭಾಗ, ಶಿವಾನುಭವ ಶಬ್ದಕೋಶ, ಭೈರವೇಶ್ವರ ಕಥಾಮಣಿ ಸೂತ್ರ ರತ್ನಾಕರ, ಅಮರ ಗಣಾಧೀಶ್ವರ ರಗಳೆಗಳು ಇವುಗಳೆಲ್ಲವನ್ನು ಭಾಗ ಭಾಗಗಳಾಗಿ 'ಶಿವಾನುಭವ' ಪತ್ರಿಕೆಯಲ್ಲಿ ಪ್ರಕಟಿಸಿದರು. ನಂತರ ಅವೆಲ್ಲವನ್ನು ಗ್ರಂಥ ರೂಪದಲ್ಲಿ ಪ್ರಕಟವಾಗುವಂತೆ ಮಾಡಿದರು.

ಹಲವಾರು ಗ್ರಂಥಗಳನ್ನು ಪ್ರಕಟಿಸುವುದರ ಮೂಲಕ ಹನ್ನೆರಡನೆಯ ಶತಮಾನದ ಸಾಂಸ್ಕೃತಿಕ ಮಹತ್ವವನ್ನು ಪುನಃ ಸೃಷ್ಟಿಸುವ ಸಾಹಸ ಮಾಡಿದರು. ಅವರು ವೈಯಕ್ತಿಕ ಬದುಕಿನ ಕಡೆ ಗಮನ ಕೊಡದೆ ಗ್ರಂಥಗಳ ಪ್ರಕಟಣೆಯ ಬಗ್ಗೆ ಹೆಚ್ಚು ಆಸಕ್ತಿ, ಒಲವನ್ನು ತೋರಿಸುವುದರ ಮೂಲಕ ಮಹದುಪಕಾರ ಮಾಡಿದ್ದಾರೆ. ಅವರು ಇಷ್ಟೆಲ್ಲ ಅಪರಿಮಿತವಾದ ಸಾಧನೆ ಮಾಡಿದರೂ ಅವರು ಹೇಳಿದ್ದು "ಹೀಗೆ ನಾನು ನಡೆಸಿದ ವೀರಶೈವ ಸಾಹಿತ್ಯ ಸಂಶೋಧನಾ ಕಾರ್ಯಗಳು ಅಪೂರ್ಣವಾಗಿವೆಯೆಂಬ ತಿಳುವಳಿಕೆಯು ನನಗೆ ಪೂರ್ಣವಾಗಿದ್ದರೂ ಬೇರೆ ಸಂಶೋಧಕರ ಲಕ್ಷ್ಯವನ್ನು ಈ ಪರಿಸ್ಥಿತಿಗೆ ಎಳೆಯುವ ಉದ್ದೇಶವಾಗಿ ಮಾತ್ರ ನಾನು ಈ ಸಂಗತಿಗಳನ್ನು ಇಲ್ಲಿ ಉಲ್ಲೇಖಿಸುತ್ತಿದ್ದೇನೆ". ಇಲ್ಲಿ ಅವರು ಹೇಳಿರುವ ಮಾತುಗಳು ಅವರ ಘನವ್ಯಕ್ತಿತ್ವದ ದ್ಯೋತಕವಾಗಿದೆ.

**ವಚನ ಗುಮ್ಮಟ–ವಚನ ಪಿತಾಮಹ :**

ಫ.ಗು. ಹಳಕಟ್ಟಿಯವರು ಸ್ಥಿತಪ್ರಜ್ಞರು, ಸಮಸ್ಯೆಗಳಿಗೆ ಎದೆಯೊಡ್ಡಿ ನಿಲ್ಲುವ ಎದೆಗಾರಿಕೆ. ಭಾವನಾತ್ಮಕ ಸನ್ನಿವೇಶದಲ್ಲಿಯೂ ಸಹನೆಯನ್ನು ಕಳೆದುಕೊಳ್ಳಲಿಲ್ಲ. ಆಗಿನ ಕಾಲದಲ್ಲಿ ೧೨೦೦ ರೂಪಾಯಿಗಳ ಸಂಬಳ ತರುವ ಮಗ ಅಪಮೃತ್ಯುವಿಗೆ ಒಳಗಾದಾಗಲೂ ಅವರು ನಂಜನ್ನುಂಡ ನಂಜುಂಡನಾಗಿ ಅದನ್ನು ಸಮಚಿತ್ತದಿಂದ ಸ್ವೀಕರಿಸಿ, ಮನೆಯಲ್ಲಿ ಸೂತಕದ ವಾತಾವರಣವಿದ್ದರೂ, ಏನೂ ಆಗಿಲ್ಲವೆಂಬಂತೆ ವಚನ ಸಾಹಿತ್ಯದ ಅಧ್ಯಯನ, ಪ್ರಕಟಣೆಯಲ್ಲಿ ಮುಳುಗಿದರು. ಶಿಸ್ತಿನ ಬದುಕಿಗೆ ಹೆಸರಾದ ಅವರ ಬದುಕಿನ ಗುರಿಯೇ ಶರಣ ಸಾಹಿತ್ಯಕ್ಕೆ ತಮ್ಮನ್ನು ಅರ್ಪಿಸಿಕೊಂಡುದಾಗಿತ್ತು. ಒಮ್ಮೆ ಕನ್ನಡದ ಕಣ್ಣ ಬಿ.ಎಂ.ಶ್ರೀ ಅವರು ಬಿಜಾಪುರಕ್ಕೆ ಬಂದಾಗ ಕೆಲವರು ಅವರನ್ನು ಪ್ರಶ್ನಿಸಿದರು, ಗೋಳಗುಮ್ಮಟ ನೋಡಿದ್ದೀರಾ ಎಂದು. ಅದಕ್ಕೆ ಅವರು **"ಅದನ್ನು ನೋಡಿಲ್ಲ, ಅದರ ಬಗ್ಗೆ ಕೇಳಿದ್ದೇನೆ; ಅದಕ್ಕಿಂತ ಮುಖ್ಯವಾದ ಗುಮ್ಮಟ ಒಂದಿದೆಯಲ್ಲಾ ವಚನ ಗುಮ್ಮಟ ಅದನ್ನು ನೋಡಲೆಂದೇ ಬಂದಿದ್ದೇನೆ"** ಎಂದು ಹೇಳುವುದರ ಮೂಲಕ ಪ್ರಶ್ನೆ ಕೇಳುವವರನ್ನು ವಿಸ್ಮಯಗೊಳಿಸಿದರಂತೆ. ಆಚಾರ್ಯ ಬಿ.ಎಂ.ಶ್ರೀ ಅವರನ್ನು 'ವಚನ ಪಿತಾಮಹ' ಎಂದು ಹೇಳುವುದರ ಮೂಲಕ ಅವರ ಸಾಧನೆಗೆ ಗೌರವವನ್ನು ತಂದುಕೊಟ್ಟರು. ಅಷ್ಟೇ ಅಲ್ಲ '೬೪ನೆಯ ಪುರಾತನರು' ಎಂದು ಕರೆದು ಒಬ್ಬ ಶ್ರೇಷ್ಠ ವಿದ್ವಾಂಸರು ಮತ್ತೊಬ್ಬ ಶ್ರೇಷ್ಠ ವಿದ್ವಾಂಸರಿಗೆ ನೀಡಿದ ಗೌರವ. ಬಿ.ಎಂ.ಶ್ರೀ ಅವರ ಹೃದಯ ಶ್ರೀಮಂತಿಕೆಯ ದ್ಯೋತಕ. ಅಲ್ಲದೆ ಫ.ಗು. ಹಳಕಟ್ಟಿಯವರು ವಚನ ಸಾಹಿತ್ಯಕ್ಕೆ ನೀಡಿದ ಕೊಡುಗೆಗೆ ನೀಡಿದ ಮಹೋನ್ನತ ಗೌರವ.

ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿದ ಹಿರಿಯರಲ್ಲಿ ಇವರು ಒಬ್ಬರು. ೧೯೨೭ ರಲ್ಲಿ ನವಕರ್ನಾಟಕ ಪತ್ರಿಕೆಯನ್ನು ಆರಂಭಿಸಿದರು. ಸಂಪಾದಕೀಯ ಬರಹದಲ್ಲಿ ಅವರು ಪ್ರಸ್ತಾಪಿಸಿರುವ ಮಾತುಗಳು ಗಮನಾರ್ಹವಾದವು. "ಇದರಲ್ಲಿ ರಾಜಕೀಯ, ಸಾಮಾಜಿಕ, ಔದ್ಯೋಗಿಕ, ಶೈಕ್ಷಣಿಕ ವಿಷಯದಲ್ಲಿ ಕರ್ನಾಟಕಸ್ಥರು ಹೇಗೆ ಮುಂದುವರಿಯಬೇಕು ಎಂಬುದರ ಬಗ್ಗೆ ವಿವೇಚನೆಗಳೂ ಪ್ರಯತ್ನಗಳೂ ಈ ಪತ್ರಿಕೆಯ ದ್ವಾರಾ ಮಾಡಲ್ಪಡುವುದು. ಇದು ಸಮಾಜ, ಪಂಗಡ, ಜಾತಿ ಈ ಬಗ್ಗೆ ಯಾವ ತರದ ಭೇದಭಾವಗಳನ್ನು ಎಣಿಸದೆ ಯಾವುದು ಸತ್ಯವಾದದ್ದೋ, ನ್ಯಾಯವಾದದ್ದೋ ಅದನ್ನೇ ನಿಷ್ಪಕ್ಷಪಾತದಿಂದಲೂ ನಿರ್ಭಯದಿಂದಲೂ ಹೇಳಲೂ ಸಿದ್ಧವಾಗಿದೆ. ಇವರಲ್ಲಿ ಕರ್ನಾಟಕದ ಸಂಸ್ಕೃತಿಯ ಹೆಚ್ಚಳವು ಬಹುವಿಶದವಾಗಿ ಇಡಲ್ಪಡುವುದು. ಸರ್ವ ವಿಷಯದಲ್ಲಿಯೂ ಮುಂದುವರೆದು 'ನವಕರ್ನಾಟಕ' ವನ್ನು ಸಿದ್ಧಗೊಳಿಸುವುದೇ ಈ ಪತ್ರಿಕೆಯ ಮುಖ್ಯಧ್ಯೇಯವಾಗಿದೆ" ಎಂಬ ಮಾತುಗಳಲ್ಲಿ ಕರ್ನಾಟಕ ಏಕೀಕರಣವಾಗಬೇಕು ಎಂಬ ಆಶಯವಿದೆ.

ನಾಡಿನ ಹಿರಿಯ ಕವಿ, ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರಾದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ಹೇಳಿರುವಂತೆ "ಅಲಭ್ಯವಾಗಿದ್ದ ಶರಣ ಸಾಹಿತ್ಯ ಸಂಪಾದನೆ, ಪ್ರಕಟಣೆ, ಅಖಂಡ ಕರ್ನಾಟಕಕ್ಕಾಗಿ ಹೋರಾಟ, ಇವುಗಳ ಮೂಲಕ ಸಂಸ್ಕೃತಿ ಸಂವರ್ಧನೆಗೆ ಕಾರಣರಾದ ಹಳಕಟ್ಟಿಯವರ ಶೈಕ್ಷಣಿಕ ಬದುಕು ಕೂಡ ಅಷ್ಟೇ ಮಹತ್ವದ್ದಾಗಿತ್ತು. ಸರಳತೆ ಎನ್ನುವುದು ಅವರ ಬದುಕಿನ ಉಸಿರಾಟ ಆಗಿತ್ತು. ೮೪ ವರ್ಷಗಳ ಸುದೀರ್ಘ ಜೀವನದಲ್ಲಿ ಅವರು ಐಹಿಕ ದೃಷ್ಟಿಯಿಂದ ಬಡವರು, ಆದರೆ ಬದುಕಿನಲ್ಲಿ ಸಂತೃಪ್ತಿಗೊಂಡ ಮಹಾನುಭಾವರು. ಬಡತನಕ್ಕೆ ನಾಚಿದವರಲ್ಲ, ಸಾಂಸ್ಕೃತಿಕ ಬಡತನ ಎಂದೂ ಅವರ ಬಳಿ ಸುಳಿಯಲಿಲ್ಲ" ಎಂಬ ಅರ್ಥಪೂರ್ಣವಾದ ಮಾತುಗಳು ಅವರ ವ್ಯಕ್ತಿತ್ವಕ್ಕೆ ಕಿರೀಟಪ್ರಾಯವಾಗಿವೆ.

**ಪ್ರಶಸ್ತಿ–ಗೌರವ :**

ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ೧೯೨೭ ರಲ್ಲಿ ಬಳ್ಳಾರಿಯಲ್ಲಿ ನಡೆದ ಅಖಿಲ ಭಾರತ ಕನ್ನಡ





ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡುವುದರ ಮೂಲಕ ಗೌರವವನ್ನು ಸಲ್ಲಿಸಿತು. ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷ ಪೀಠವನ್ನು ಅಲಂಕರಿಸಿದ್ದ ಹಳಕಟ್ಟಿಯವರು ೧೯೩೩ ರಲ್ಲಿ ಅಖಿಲ ಭಾರತ ವೀರಶೈವ ಮಹಾಸಭಾ ಅಧಿವೇಶನದ ಅಧ್ಯಕ್ಷರಾಗಿದ್ದರು. ೧೯೬೪ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್‌ನ್ನು ನೀಡಿ ತಮ್ಮನ್ನು ತಾವೇ ಗೌರವಿಸಿಕೊಂಡಿತು. ಗೌರವ ಡಾಕ್ಟರೇಟ್ ಪದವಿ ಪಡೆಯಲು ವಿಶ್ವವಿದ್ಯಾಲಯ ಆಹ್ವಾನಿಸಿದಾಗ ಆ ಸಮಾರಂಭಕ್ಕೆ ಹರಿದ ಕೋಟಿನಲ್ಲೇ ಹಾಜರಾಗಲು ಅವರು ಸಂಕೋಚಪಡಲಿಲ್ಲ. ಆಗಿನ ಕುಲಪತಿಗಳಾಗಿದ್ದ ಪಾವಟೆಯವರು "ಇದೇನು ಹರಿದ ಕೋಟಿನಲ್ಲಿ ಬಂದಿದ್ದೀರಲ್ಲ" ಅಂದಾಗ ಅವರು ನೀಡಿದ ಉತ್ತರ "ಕುಲಪತಿಗಳೇ ಕೋಟು ಹರಿದಿರಬಹುದು; ಆದರೆ ಅದು ಸುಶುಭ್ರವಾಗಿದೆ" ಎಂದರು. ಅವರ ಮಾತುಗಳಿಂದ ಕುಲಪತಿಗಳವರು ಮೂಕವಿಸ್ಮಿತರಾದರು. ಅವರ ಸರಳತೆಯನ್ನು ಕಂಡು ಪಾವಟೆಯವರ ಕಣ್ಣುಗಳು ಮಂಜಾದವು.

ದೊಡ್ಡವರ ಬದುಕು ಹೇಗಿರಬೇಕು ಎಂಬುದಕ್ಕೆ ಡಾ. ಫ.ಗು. ಹಳಕಟ್ಟಿಯವರು ನಡೆದು ಬಂದ ದಾರಿ, ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಕೊಡುಗೆ ಮಹತ್ವದ ನಿದರ್ಶನವಾಗಿದೆ.

**ಅಭಿನಂದನೆ :**

ಬಿಜಾಪುರದಲ್ಲಿರುವ ಬಿ.ಎಲ್.ಡಿ.ಇ. ಸಂಸ್ಥೆ ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ ಸಂಶೋಧನ ಕೇಂದ್ರದ ವತಿಯಿಂದ ನಾಡಿನ ಹಿರಿಯ ಶ್ರೇಷ್ಠ ಸಂಶೋಧಕರಾದ ಡಾ. ಎಂ.ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಡಾ. ಫ.ಗು. ಹಳಕಟ್ಟಿ ಸಮಗ್ರ ಸಾಹಿತ್ಯ ಪ್ರಕಟಣೆ ಯೋಜನೆಯಡಿಯಲ್ಲಿ ವಚನ ಸಾಹಿತ್ಯ, ವಚನ ವಿವೇಚನೆ, ಕಾವ್ಯ ಸಾಹಿತ್ಯ, ಚರಿತ್ರೆ ಸಾಹಿತ್ಯ, ಲೇಖನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ೧೫ ಸಂಪುಟಗಳಲ್ಲಿ ಹೊರತರುವುದರ ಮೂಲಕ ಶರಣಾಭಿಮಾನಿಗಳು ಅಭಿಮಾನ ಪಡುವಂತಹ ಶ್ಲಾಘನೀಯ ಕೊಡುಗೆಯನ್ನು ನೀಡಿದೆ. ಇದೊಂದು ಮಹತ್ವಪೂರ್ಣವಾದ ಕೆಲಸ. ಜೊತೆಗೆ ಡಾ. ಫ.ಗು. ಹಳಕಟ್ಟಿಯವರಿಗೆ ನೀಡಿದ ಮಹೋನ್ನತ ಗೌರವ. ಈ ಯೋಜನೆ ಯಶಸ್ವಿಯಾಗಲು ಸಹಕರಿಸಿದವರೆಲ್ಲರೂ ಅಭಿನಂದನಾರ್ಹರು. ಕನ್ನಡಿಗರಿಗೆಲ್ಲ ಪ್ರಾತಃ ಸ್ಮರಣೀಯರಾದ ಡಾ. ಫ.ಗು. ಹಳಕಟ್ಟಿ ಅವರು ಬಿಟ್ಟು ಹೋದ, ಕೊಟ್ಟು ಹೋದ ಸಾಹಿತ್ಯ ಇರುವವರಿಗೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಚಿರಂಜೀವಿಗಳಾಗಿರುತ್ತಾರೆ.

* * *

## ಅಭಿನಂದನೆ



**ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ರಾಜ್ಯಕ್ಕೆ ದ್ವಿತೀಯ ರ್‍ಯಾಂಕ್ ಪಡೆದ ಚಿ॥ ಪಿ. ತೇಜಸ್**

೨೦೧೭ರ ಸಾಲಿನಲ್ಲಿ ನಡೆದ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತುಮಕೂರಿನ ಶ್ರೀ ಸಿದ್ಧಗಂಗಾ ಪ್ರೌಢ ಶಾಲೆಯ ವಿದ್ಯಾರ್ಥಿ ಚಿ॥ ಪಿ. ತೇಜಸ್ ರಾಜ್ಯಕ್ಕೆ ಎರಡನೇ ರ್‍ಯಾಂಕ್ ಪಡೆಯುವುದರ ಮೂಲಕ ಶಾಲೆಗೆ ಹಾಗೂ ಜಿಲ್ಲೆಗೆ ಕೀರ್ತಿಯನ್ನು ತಂದಿದ್ದಾರೆ. ೬೨೫ ಅಂಕಗಳಿಗೆ (ಕನ್ನಡ–೧೨೫, ಗಣಿತ–೧೦೦, ಇಂಗ್ಲೀಷ್–೧೦೦, ವಿಜ್ಞಾನ–೯೯, ಹಿಂದಿ–೧೦೦, ಸಮಾಜ ವಿಜ್ಞಾನ–೧೦೦) ೬೨೪ ಅಂಕಗಳನ್ನು ಪಡೆದಿರುವ ಚಿ॥ ತೇಜಸ್ ಶಿಕ್ಷಕ ದಂಪತಿಗಳಾದ ಶ್ರೀ ಪುಟ್ಟಗಂಗಯ್ಯ ಮತ್ತು ಶ್ರೀಮತಿ ಜಿ. ರೇಣುಕಾ ಅವರ ಸುಪುತ್ರ. ತುಮಕೂರು ಜಿಲ್ಲೆಗೆ ಪ್ರಥಮ ಸ್ಥಾನವನ್ನು ಪಡೆದ ಹೆಗ್ಗಳಿಕೆಗೆ ಪಾತ್ರರಾಗಿರುವ ಚಿ॥ ತೇಜಸ್ ಅವರನ್ನು ಪರಮಪೂಜ್ಯ ಶ್ರೀ ಶ್ರೀ ಗಳವರು ಸನ್ಮಾನಿಸಿ ಆಶೀರ್ವದಿಸಿದ್ದಾರೆ. ಶಾಲಾ ಆಡಳಿತ ಮಂಡಳಿ ಅಭಿನಂದಿಸಿ ಮುಂದಿನ ಭವಿಷ್ಯ ಉಜ್ವಲವಾಗಲೆಂದು ಶುಭ ಹಾರೈಸಿದ್ದಾರೆ.

## ಶ್ರೀವಾಣಿ

ನಿಜವಾದ ವಿದ್ಯೆ ಗಳಿಸಬೇಕಾದರೆ ಕಷ್ಟಪಟ್ಟು ಅಧ್ಯಯನ ಮಾಡಬೇಕು. ವಿದ್ಯಾಭ್ಯಾಸದ ಜೀವನ ಕಷ್ಟ ಎಂಬ ಕಲ್ಪನೆ ಉಂಟಾಗಬೇಕು. ವಿದ್ಯಾರ್ಥಿಯಾಗಿಯೇ ಜೀವನ ಸಾಗಿಸುವ ಒಂದು ಪರಿವರ್ತನೆಯಾಗಬೇಕು. "ಸಾಧಕ ವಿದ್ಯೆ ಬಾಧಕ ದ್ರವ್ಯ" ಎಂಬ ಸೂಕ್ತಿಯಂತೆ ಸಾಧನೆ ಮಾಡಿಯೆ ವಿದ್ಯೆ ಕಲಿಯಬೇಕು. ಇದು ಎಲ್ಲಕ್ಕೂ ಅನ್ವಯವಾಗುವಂತಹ ಮಾತು.

# ಉತ್ತರ ಕರ್ನಾಟಕದಲ್ಲಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೦ನೇ ಜನ್ಮದಿನೋತ್ಸವ

ವರದಿ : ದೇವೇಂದ್ರಪ್ಪ ಆವಂಟಿ

ಉತ್ತರ ಕರ್ನಾಟಕದ ಕಲ್ಬುರ್ಗಿ, ಬೀದರ್ ಹಾಗೂ ಯಾದಗಿರಿ ಜಿಲ್ಲೆಯ ವಿದ್ಯಾರ್ಥಿಗಳು ಶ್ರೀಮಠದಲ್ಲಿ ವ್ಯಾಸಂಗ ಮಾಡಿ ತಮ್ಮ ಭವಿಷ್ಯವನ್ನು ರೂಪಿಸಿಕೊಂಡ ಸಾವಿರಾರು ಜನ ವಿದ್ಯಾರ್ಥಿಗಳಿದ್ದಾರೆ. ಅವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅನನ್ಯ ಭಕ್ತಿ ಗೌರವವನ್ನಿಟ್ಟುಕೊಂಡಿದ್ದಾರೆ. ಪರಮಪೂಜ್ಯರು ೧೧೦ನೇ ವರ್ಷಕ್ಕೆ ಶಿವಹೆಜ್ಜೆಗಳನ್ನಿಟ್ಟ ಶುಭ ಸಂದರ್ಭದಲ್ಲಿ ಹಳೆಯ ವಿದ್ಯಾರ್ಥಿಗಳು, ಅಭಿಮಾನಿಗಳು, ಭಕ್ತರು ಪೂಜ್ಯರ ಜನ್ಮದಿನಾಚರಣೆ ಕಾರ್ಯಕ್ರಮವನ್ನು ಹಮ್ಮಿಕೊಂಡು ಅರ್ಥಪೂರ್ಣವಾಗಿ ಆಚರಿಸುವುದರ ಮೂಲಕ ಭಕ್ತಿ ಗೌರವ ಸಲ್ಲಿಸಿದ್ದಾರೆ. ಕಾರ್ಯಕ್ರಮಗಳ ಬಗ್ಗೆ ಶ್ರೀಮಠದ ಹಳೆಯ ವಿದ್ಯಾರ್ಥಿಗಳು, ಶ್ರೀಮಠ ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ಭಕ್ತಿ ಗೌರವ ಇಟ್ಟುಕೊಂಡಿರುವ ಉತ್ತರ ಕರ್ನಾಟಕ ಕನ್ನಡಿಗರ ದಿನಪತ್ರಿಕೆಯ ಪ್ರಧಾನ ವರದಿಗಾರರಾದ ಶ್ರೀ ದೇವೇಂದ್ರಪ್ಪ ಆವಂಟಿಯವರು ವರದಿ ಮಾಡಿದ್ದಾರೆ. ಆ ವರದಿ ಇಲ್ಲಿದೆ......

## ಸಿದ್ಧಗಂಗಾ ಶ್ರೀಗಳವರಿಗೆ "ಭಾರತ ರತ್ನ" ನೀಡಲಿ

### ಕಲಬುರಗಿ :

ತ್ರಿವಿಧ ದಾಸೋಹಿ, ನಡೆದಾಡುವ ದೇವರು ತುಮಕೂರಿನ ಸಿದ್ಧಗಂಗಾ ಮಠದ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರಿಗೆ ಭಾರತ ರತ್ನ ಗೌರವ ಸಿಗಬೇಕು ಎಂಬುದು ಸಮಸ್ತ ಕನ್ನಡಿಗರ ಅಭಿಲಾಷೆಯಾಗಿದೆ ಎಂದು ನಾಲವಾರ ಕೋರಿಸಿದ್ಧೇಶ್ವರ ಸಂಸ್ಥಾನ ಮಠದ ಪೂಜ್ಯ ಡಾ. ಶ್ರೀ ಸಿದ್ಧತೋಟೇಂದ್ರ ಮಹಾಸ್ವಾಮೀಜಿ ಅಭಿಮತ ವ್ಯಕ್ತಪಡಿಸಿದರು.

ಇಲ್ಲಿನ ಜಗತ್ ವೃತ್ತದ ಬಸವೇಶ್ವರ ಮೂರ್ತಿ ಆವರಣದಲ್ಲಿ ಸಿದ್ಧಗಂಗಾ ಮಠದ ಹಳೇ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ ಆಯೋಜಿಸಿದ್ದ ಶತಾಯುಷಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ೧೧೦ನೇ ಜನ್ಮ ದಿನೋತ್ಸವದಲ್ಲಿ ಸಾನ್ನಿಧ್ಯ ವಹಿಸಿ ಶ್ರೀಗಳು ಆಶೀರ್ವಚನ ನೀಡಿದರು. ಪವಾಡಗಳು ನಡೆಯುವುದಿಲ್ಲ ಎಂಬ ಮನಸ್ಥಿತಿ ಇಂದಿನ ಆಧುನಿಕ, ತಂತ್ರಜ್ಞಾನ ಯುಗದ ಜನಸಾಮಾನ್ಯರಲ್ಲಿದೆ. ಆದರೆ ನಮ್ಮೆಲ್ಲರ ಮಧ್ಯದಲ್ಲಿಯೇ ಪವಾಡ ಎಂಬಂತೆ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ೧೧೦ ವರ್ಷ ಸಾರ್ಥಕ ಬದುಕು ನಡೆಸುತ್ತ ಪ್ರತಿನಿತ್ಯ ೧೦ ಸಾವಿರಕ್ಕೂ ಅಧಿಕ ಮಕ್ಕಳಿಗೆ ಅಕ್ಷರ, ಜ್ಞಾನ, ಸಂಸ್ಕಾರ ದಾಸೋಹ ನೀಡುತ್ತಿದ್ದಾರೆ. ಇದು ಸಾಮಾನ್ಯ ವ್ಯಕ್ತಿಯಿಂದ ಸಾಧ್ಯವಾಗದು. ಅವರೊಬ್ಬ ದೈವಿ ಪುರುಷರಾಗಿರುವುದೇ ಇದಕ್ಕೆಲ್ಲ ಕಾರಣ ಎಂದು ಬಣ್ಣಿಸಿದರು.

ನೇತೃತ್ವ ವಹಿಸಿದ್ದ ತಾಡತೆಗನೂರಿನ ರಾಮಕೃಷ್ಣ ವಿವೇಕಾನಂದ ಆಶ್ರಮದ ಶ್ರೀ ಸ್ವಾಮಿ ಮಹೇಶ್ವರಾನಂದಜೀ ಆಶೀರ್ವಚನ ನೀಡಿ, ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಲಕ್ಷಾಂತರ ಬಡ ವಿದ್ಯಾರ್ಥಿಗಳ ಬಾಳು ಬೆಳಗಿದ, ಬೆಳಗುತ್ತಿರುವ ಮಹಾನ್ ಜ್ಯೋತಿಯಾಗಿದ್ದಾರೆ. ಶಿಕ್ಷಣದ ಜತೆ ಸಂಸ್ಕಾರ ಮತ್ತು ಬದುಕುವ ನೀತಿ ಕಲಿಸುತ್ತಿದ್ದಾರೆ ಎಂದರು.



ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದವರಿಗೆ ಸಿದ್ಧಗಂಗಾಶ್ರೀ ಹಾಗೂ ಸಂಘಸಿರಿ ಪ್ರದಾನ ಮಾಡಲಾಯಿತು.





ಕಲಬುರಗಿ ರಾಮಕೃಷ್ಣ ವಿವೇಕಾನಂದ ಆಶ್ರಮದ ಶ್ರೀ ಸ್ವಾಮಿ ಮೇದಾನಂದಜಿ ಹಿತೋಪದೇಶ ನೀಡಿದರು. ನಂದಗೋಕುಲ ಅನಾಥಾಶ್ರಮಕ್ಕೆ ೫೧೧೦ ರೂ. ದೇಣಿಗೆ ನೀಡುವುದರೊಂದಿಗೆ ಕಾರ್ಯಕ್ರಮ ಉದ್ಘಾಟಿಸಲಾಯಿತು.

ವಿಧಾನ ಪರಿಷತ್ ಸದಸ್ಯ ಅಮರನಾಥ ಪಾಟೀಲ್, ಸಂಘದ ಅಧ್ಯಕ್ಷ ಅರುಣಕುಮಾರ ಪಾಟೀಲ ಕೊಡಲಹಂಗರಗಾ, ಕಾರ್ಯದರ್ಶಿ ದೇವಿಂದ್ರ ಆವಂಟಿ, ಹಿರಿಯರಾದ ಕಲ್ಯಾಣರಾವ ಪಾಟೀಲ್, ಪಾಲಿಕೆ ಸದಸ್ಯ ಶರಣು ಮೋದಿ, ಪತ್ರಕರ್ತರ ಸಂಘ ಅಧ್ಯಕ್ಷ ಭವಾನಿಸಿಂಗ್ ಠಾಕೂರ್, ಪಾಲಿಕೆ ಪರಿಸರ ಅಭಿಯಂತರ ಅಭಯಕುಮಾರ, ಪ್ರಮುಖರಾದ ಶರಣು ಪಪ್ಪಾ, ಮಂಜುನಾಥ ಹಾಗರಗಿ, ಅಶೋಕ ಹೊಳಕುಂದಿ, ವಿಜಯಕುಮಾರ ತೇಗಲತಿಪ್ಪಿ, ನಾಗಲಿಂಗಯ್ಯ ಮಠಪತಿ, ಶ್ರೀ ಮಠದ ಹಳೇ ವಿದ್ಯಾರ್ಥಿಗಳಾದ ಅಶೋಕ ರಟಕಲ್, ಚನ್ನಬಸಯ್ಯ ಗಾರಪಂಳ್ಳಿ, ರುದ್ರಮುನಿ ಪುರಾಣಿಕ, ಜಗದೀಶ ಹಲಕರ್ಟಿ, ವಿಜಯಕುಮಾರ ಬಿರಾದಾರ, ಸಂಗಯ್ಯ ಸ್ವಾಮಿ, ಮಂಜುನಾಥ ಸ್ವಾಮಿ ಉಪಸ್ಥಿತರಿದ್ದರು.

ಪ್ರಧಾನಿ ಶ್ರೀ ನರೇಂದ್ರ ಮೋದಿ ಅವರು ಟ್ವೀಟ್ ಮಾಡಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು ಯಾವುದೇ ಜಾತಿ, ಧರ್ಮಕ್ಕೆ ಸೀಮಿತರಲ್ಲ ಎಂದು ಹೇಳಿದ್ದಾರೆ. ಇಂಥ ಮಹಾನ್ ಯೋಗಿ, ಸಂತನಿಗೆ ಕೇಂದ್ರ ಸರ್ಕಾರ ಭಾರತರತ್ನ ನೀಡುವ ಮೂಲಕ ತನ್ನ ಘನತೆ ಹೆಚ್ಚಿಸಿಕೊಳ್ಳಬೇಕು.

**ಪ್ರಶಸ್ತಿ ಗೌರವ :**

ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿರುವ ಎಂ.ಬಿ.ಅಂಬಲಗಿ ಅವರಿಗೆ ಸಿದ್ಧಗಂಗಾ ಶ್ರೀ, ಶಂಕರಗೌಡ ಪೊಲೀಸ್ ಪಾಟೀಲ್ ಅವರಿಗೆ ಡಾ.ಶಿವಕುಮಾರ ಶ್ರೀ, ಡಾ.ಟಿ.ಎ.ಪಾಟೀಲ್, ಎಂ.ರಾಘವೇಂದ್ರ ದೇಸಾಯಿ, ಗುಂಡಪ್ಪ ಧೂಳಗೊಂಡ, ಬಸಣ್ಣಗೌಡ ಮದ್ನಿ ಹಾಗೂ ನಾಗಯ್ಯ ಸ್ವಾಮಿ ಕನಕಪುರ ಅವರಿಗೆ ಸಂಘಶ್ರೀ ಪ್ರಶಸ್ತಿ ನೀಡಿ ಗೌರವಿಸಲಾಯಿತು.

### ಬೀದರ್ :

ಊಟ, ವಸತಿಸಹಿತ ಉಚಿತ ಶಿಕ್ಷಣದ ಮೂಲಕ ಲಕ್ಷಾಂತರ ಬಡ ವಿದ್ಯಾರ್ಥಿಗಳ ಬಾಳು ಬೆಳಗುತ್ತಿರುವ ತುಮಕೂರಿನ ಸಿದ್ಧಗಂಗಾ ಮಠದ ಶತಾಯುಷಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಅವರಿಗೆ ಕೇಂದ್ರ ಸರ್ಕಾರ ಭಾರತ ರತ್ನ ಪ್ರಶಸ್ತಿ ನೀಡಿ ಗೌರವಿಸಬೇಕು



ಭಾಲ್ಕಿಮಠದ ಪೂಜ್ಯ ಡಾ. ಶ್ರೀ ಬಸವಲಿಂಗ ಪಟ್ಟದೇವರಿಂದ ಕಾರ್ಯಕ್ರಮ ಉದ್ಘಾಟನೆ.

ಎಂದು ಕನ್ನಡ ಸಾಹಿತ್ಯ ಪರಿಷತ್ ಜಿಲ್ಲಾಧ್ಯಕ್ಷ ಸುರೇಶ ಚನ್ನಶೆಟ್ಟಿ ಆಗ್ರಹಿಸಿದರು.

ತುಮಕೂರು ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳ ಸಂಘದಿಂದ ನಗರದ ಶರಣ ಉದ್ಯಾನದಲ್ಲಿ ಶನಿವಾರ ಆಯೋಜಿಸಿದ್ದ ಪೂಜ್ಯರ ೧೧೦ನೇ ಜನ್ಮ ದಿನ ಹಾಗೂ ಸಂತರ ದಿನಾಚರಣೆ ಉದ್ಘಾಟಿಸಿ ಮಾತನಾಡಿ, ಸರ್ಕಾರದಿಂದ ಆಗದಂಥ ಕೆಲಸವನ್ನು ಪೂಜ್ಯರು ಮಾಡುತ್ತಿದ್ದಾರೆ. ಅವರಿಗೆ ಯಾವ ಪ್ರಶಸ್ತಿ ಕೊಟ್ಟರೂ ಕಮ್ಮಿಯೇ. ಭಾರತ ರತ್ನ ಪ್ರಶಸ್ತಿ ನೀಡಿದರೆ, ಈ ಪ್ರಶಸ್ತಿಯ ಘನತೆ ಮತ್ತು ಗೌರವ ಹೆಚ್ಚಾಗುತ್ತದೆ ಎಂದು ಹೇಳಿದರು.

ಹುಲಸೂರಿನ ಶ್ರೀ ಶಿವಾನಂದ ಸ್ವಾಮೀಜಿ ಮಾತನಾಡಿ, ಯಾವುದೇ ಜಾತಿ, ಮತ ಭೇದವಿಲ್ಲದೆ ಬಡ ವಿದ್ಯಾರ್ಥಿಗಳಿಗೆ ಅನ್ನ, ವಸತಿ, ಅಕ್ಷರ ದಾಸೋಹ ಮಾಡುತ್ತಿರುವ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಮನುಕುಲದ ನಂದಾದೀಪ. ಅವರು ವಿಶ್ವರತ್ನ. ಅವರಿಗೆ ಭಾರತ ರತ್ನ ಪ್ರಶಸ್ತಿ ಕೊಟ್ಟರೆ ಆ ಪ್ರಶಸ್ತಿಗೇ ಗೌರವ ಬರಲಿದೆ ಎಂದು ಅಭಿಪ್ರಾಯಪಟ್ಟರು.

ಬಸವ ಸೇವಾ ಪ್ರತಿಷ್ಠಾನದ ಅಕ್ಕ ಅನ್ನಪೂರ್ಣ ಮಾತನಾಡಿ, ಲಿಂಗಪೂಜೆ ಜತೆಗೆ ಜಂಗಮ ಸೇವೆ ಮಾಡುತ್ತ ಇಡೀ ಜಗತ್ತೇ ತನ್ನ ಕಡೆಗೆ ತಿರುಗಿ ನೋಡುವಂತೆ ಮಾಡಿದವರು ಪೂಜ್ಯರಾದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ. ಅವರ ಜನ್ಮ ದಿನವನ್ನು ದಾಸೋಹ ದಿನವನ್ನಾಗಿ ಆಚರಿಸಬೇಕು ಎಂದು ಹೇಳಿದರು.

ಭಾಲ್ಕಿ ಹಿರೇಮಠದ ಡಾ. ಶ್ರೀ ಬಸವಲಿಂಗ ಪಟ್ಟದ್ದೇವರು ಮಾತನಾಡಿ, ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಗೆ ಭಾರತರತ್ನ ಪ್ರಶಸ್ತಿ ಬಂದೇ ಬರುತ್ತದೆ ಎಂಬ ವಿಶ್ವಾಸವಿದೆ. ಆದರೆ ಅವರು ಜೀವಂತ ಇದ್ದಾಗಲೇ ಪ್ರಶಸ್ತಿ ದೊರೆತರೆ ಹೆಚ್ಚು ಸೂಕ್ತ ಎಂದರು.

ಪತ್ರಕರ್ತ ಚಂದ್ರಕಾಂತ ಮಸಾನಿ, ಕಸಾಪ ಜಿಲ್ಲಾ ಗೌರವ ಕಾರ್ಯದರ್ಶಿ ಡಾ.ಬಸವರಾಜ ಬಲ್ಲೂರು ಮಾತನಾಡಿ, ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಗಳ ಸಾಮಾಜಿಕ ಸೇರಿ ವಿವಿಧ ಸೇವೆ ನಾಡಿನ ಮಠಾಧೀಶರಿಗೆ ಮಾದರಿ. ಸ್ವಾಮೀಜಿ ಆದರ್ಶ ತತ್ವಗಳನ್ನು ಎಲ್ಲರೂ ಪಾಲಿಸಬೇಕು ಎಂದರು.

ಹಳೆಯ ವಿದ್ಯಾರ್ಥಿಗಳ ಸಂಘದ ಅಧ್ಯಕ್ಷ ಶಿವಕುಮಾರ ಪಾಟೀಲ್ ತೇಗಂಪುರ ಅಧ್ಯಕ್ಷತೆ ವಹಿಸಿದ್ದರು. ಡಾ.ಗಂಗಾಂಬಿಕೆ ಅಕ್ಕ, ಡಾ. ರಾಜಶೇಖರ ಸ್ವಾಮಿ ಗೋರ್ಟಾ ಮಾತನಾಡಿದರು. ರಮೇಶ ಪಾಟೀಲ್ ಪಾಶಾಪುರ, ಧನರಾಜ ಕಡ್ಯಾಳ ಇತರರಿದ್ದರು.

ನಾಗಭೂಷಣ ಹುಗ್ಗೆ ಪ್ರಾಸ್ತಾವಿಕ ಮಾತನಾಡಿದರು. ದೇವೇಂದ್ರ ಕರಂಜೆ ನಿರೂಪಿಸಿದರು. ನರೇಂದ್ರ ಹಂಗರಗಿ ವಂದಿಸಿದರು. ಇದಕ್ಕೂ ಮುನ್ನ ಹಳೆಯ ವಿದ್ಯಾರ್ಥಿಗಳು ಶಿವಕುಮಾರ ಸ್ವಾಮೀಜಿ ಅವರ ಆಯುಷ್ಯ, ಆರೋಗ್ಯಕ್ಕಾಗಿ ಪ್ರಾರ್ಥಿಸಿ ಪಾಪನಾಶ ದೇಗುಲದಲ್ಲಿ ವಿಶೇಷ ಪೂಜೆ ಸಲ್ಲಿಸಿದರು. ನಂತರ ಅಲ್ಲಿಂದ ಪ್ರಮುಖ ಮಾರ್ಗಗಳ ಮೂಲಕ ಕಾರ್ಯಕ್ರಮ ಸ್ಥಳವಾದ ಶರಣ ಉದ್ಯಾನವರೆಗೆ ಬೈಕ್ ರ್‍ಯಾಲಿ ನಡೆಸಿದರು.

ಸಂಸ್ಕಾರಯುತ ಶಿಕ್ಷಣದ ಫಲವಾಗಿ ಸಿದ್ಧಗಂಗಾ ಮಠದಲ್ಲಿ ವ್ಯಾಸಂಗ ಮಾಡಿರುವ ಅಸಂಖ್ಯಾತ ವಿದ್ಯಾರ್ಥಿಗಳು ಉತ್ತಮ ಬದುಕು ಕಟ್ಟಿಕೊಂಡಿದ್ದಾರೆ. ಇಂದು ಸರ್ಕಾರ ಮಕ್ಕಳಿಗೆ ಮಧ್ಯಾಹ್ನ ಬಿಸಿಯೂಟ, ಸಮವಸ್ತ್ರ, ಶೂ, ಸೈಕಲ್ ಸೇರಿ ಎಲ್ಲವನ್ನು ಕೊಡುತ್ತಿದೆ. ಆದರೆ ಸಂಸ್ಕಾರ ಮರೆತಿದೆ. ಉನ್ನತ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಅಡ್ಡ ಹಾದಿ ಹಿಡಿದು ಭ್ರಷ್ಟಾಚಾರದಲ್ಲಿ ಸಕ್ರಿಯ ಆಗುತ್ತಿರುವುದು ವಿಷಾದನೀಯ.

## ಯಾದಗಿರಿ

ಮತ, ಕುಲವೆನ್ನದೆ ಸರ್ವರನ್ನೂ ಪ್ರೀತಿಸುವ, ಸರ್ವಧರ್ಮದ ಸಹಸ್ರಾರು ಮಕ್ಕಳಿಗೆ ವಿದ್ಯಾದಾನದ ಜತೆಗೆ ಸಮಾಜಕ್ಕೆ ಸತ್ಪ್ರಜೆಗಳನ್ನು ನಿರ್ಮಾಣ ಮಾಡುತ್ತಿರುವ ಶರಣ ಶ್ರೇಷ್ಠ ಶ್ರೀ ಶಿವಕುಮಾರ ಸ್ವಾಮಿಗಳು ಓರ್ವ ಯೋಗಿಯಾಗಿದ್ದಾರೆ ಎಂದು ಶಾಸಕ ಡಾ.ಎ.ಬಿ. ಮಾಲಕರಡ್ಡಿ ತಿಳಿಸಿದರು. ಇಲ್ಲಿನ ಲಕ್ಷ್ಮೀನಗರ ಬಡಾವಣೆಯಲ್ಲಿನ ಶ್ರೀ ಲಕ್ಷ್ಮೀ ದೇವಸ್ಥಾನದಲ್ಲಿ ಸಿದ್ದಗಂಗಾ ಹಳೆಯ ವಿದ್ಯಾರ್ಥಿಗಳ ಬಳಗದಿಂದ ಹಮ್ಮಿಕೊಳ್ಳಲಾಗಿದ್ದ ಸಿದ್ಧಗಂಗಾ ಶ್ರೀಗಳ ೧೧೦ನೇ ಜನ್ಮದಿನಾಚರಣೆ ಕಾರ್ಯಕ್ರಮ ಉದ್ಘಾಟಿಸಿದ ಅವರು, ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ವಿದ್ವಾಂಸರಾಗಿ, ವಿವೇಕ ಚೈತನ್ಯವಾಗಿ ಸಮಾಜದ ಅಂಕು-ಡೊಂಕುಗಳನ್ನು ತಿದ್ದಿ, ಅಸಮಾನತೆ ಹೋಗಲಾಡಿಸಲು ಶ್ರಮಿಸುತ್ತಿರುವ ವಿಶ್ವ ವಂದನೀಯರು ಎಂದರು.

ಸಿದ್ಧಗಂಗಾ ಶ್ರೀಗಳು ತಮ್ಮ ಬದುಕಿನಲ್ಲಿ ಪರಿಶುದ್ಧತೆ ಕಾಯ್ದುಕೊಂಡು ಬಂದಿರುವ ಶರಣರು. ತೊಟ್ಟ ಕಾವಿಗೆ ಘನತೆ, ಅರ್ಥ ತರುವ ಮೂಲಕ ತಮ್ಮ ಬದುಕನ್ನು ಸಮಾಜಕ್ಕೆ ಸಮರ್ಪಿಸಿದ್ದರಿಂದ ಅವರ ಕಾರ್ಯ ಎಲ್ಲ ವರ್ಗದ ಜನರ ಮನಸ್ಸಿನಲ್ಲಿ ಸಿದ್ಧಗಂಗಾ ಹೆಸರು ಶಾಶ್ವತವಾಗಿ ಉಳಿದಿದೆ. ಅವರು ಇನ್ನೂ ಹೆಚ್ಚು ಕಾಲ ಬದುಕಿ ನಾಡಿಗೆ ಮಾರ್ಗದರ್ಶನ ನೀಡಲಿ ಎಂದು ಹಾರೈಸಿದರು.

ಸಿದ್ಧಗಂಗೆಯ ಪರಿಸರವನ್ನು ತಮ್ಮ ಆಧ್ಯಾತ್ಮಿಕ, ಸಾಮಾಜಿಕ ಹಾಗೂ ಕಾಯಕ ನಿಷ್ಠೆಯಿಂದ ಜಗತ್ತಿನಲ್ಲೆ ವಿಶಿಷ್ಟ ಕ್ಷೇತ್ರವನ್ನಾಗಿ ಪರಿವರ್ತಿಸಿದ ಪ್ರವರ್ತಕ. ಇಷ್ಟೆಲ್ಲ ಸಾಧನೆ ಮಾಡಿದ್ದರೂ ಸಾಮಾನ್ಯರಲ್ಲಿ ಸಾಮಾನ್ಯರಂತೆ ಸಾರ್ವಜನಿಕರೊಂದಿಗೆ ಬೆರೆತು ಮಾರ್ಗದರ್ಶನ ನೀಡುವ ಮೂಲಕ ನಾಡಿನ ನಡೆದಾಡುವ ದೇವರು ಎಂದು ಭಕ್ತರಿಂದ ಕರೆಸಿಕೊಂಡಿದ್ದಾರೆ ಎಂದು ತಿಳಿಸಿದರು.

ದೇಶದ ನಾನಾ ಭಾಗದ ಬಡ ವಿದ್ಯಾರ್ಥಿ ಮಕ್ಕಳಿಗೆ ಶಿಕ್ಷಣ, ಅನ್ನ ದಾಸೋಹ, ಆಶ್ರಯ ನೀಡಲು ಶ್ರೀಗಳು ಒತ್ತು ನೀಡಿದ ಪರಿಣಾಮ ವಿದ್ಯಾರ್ಥಿಗಳು ಒಳ್ಳೆಯ ಪ್ರಜೆಗಳಾಗಿ ರೂಪುಗೊಂಡು ಹಲವಾರು ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿದ್ದಾರೆ.



ಕಾರ್ಯಕ್ರಮದಲ್ಲಿ ಗಣ್ಯರು, ಹಳೆಯ ವಿದ್ಯಾರ್ಥಿಗಳು, ಭಕ್ತರು ಹಾಗೂ ಅಭಿಮಾನಿಗಳು





ನಾವಿಂದು ದೇಶದ ಸಂಸ್ಕೃತಿ, ಮಾನವೀಯ ಮೌಲ್ಯಗಳನ್ನು ಮರೆಯುತ್ತಿರುವುದು ಆತಂಕದ ಬೆಳವಣಿಗೆ ಎಂದು ವಿಷಾದ ವ್ಯಕ್ತಪಡಿಸಿದರು.

ವಿಧಾನ ಪರಿಷತ್ ಮಾಜಿ ಸದಸ್ಯ ಚನ್ನಾರಡ್ಡಿ ಪಾಟೀಲ್ ತುನ್ನೂರ ಮಾತನಾಡಿ, ಸಿದ್ಧಗಂಗಾ ಶ್ರೀಗಳ ಕ್ರಿಯಾಶೀಲ ಹಾಗೂ ಸಮಾಜಮುಖಿ ಕಾರ್ಯಗಳು ದೇಶಕ್ಕೆ ಮಾದರಿ. ಅವರು ಹಾಕಿಕೊಟ್ಟ ಮಾರ್ಗದಲ್ಲಿ ನಾವೆಲ್ಲರೂ ಜೀವನ ನಡೆಸುವ ಮೂಲಕ ಪರೋಪಕಾರಿ ಗುಣ ಅಳವಡಿಸಿಕೊಳ್ಳುವುದು ಅವಶ್ಯಕವಾಗಿದೆ ಎಂದು ಹೇಳಿದರು.

ದಿವ್ಯ ಸಾನ್ನಿಧ್ಯವನ್ನು ಹೆಡಗಿಮದ್ರದ ಶ್ರೀ ಶ್ರೀ ಶಾಂತಮಲ್ಲಿಕಾರ್ಜುನ ಪಂಡಿತರಾಧ್ಯ ಶಿವಾಚಾರ್ಯ ಸ್ವಾಮೀಜಿ ವಹಿಸಿದ್ದರು. ಮಾಜಿ ಶಾಸಕ ಡಾ.ವೀರಬಸವಂತರೆಡ್ಡಿ ಮುದ್ನಾಳ, ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ರಾಮರೆಡ್ಡಿ ಗೌಡ ತಂಗಡಗಿ, ಲಿಂಗನಗೌಡ ಮಲ್ಹಾರ, ಕಸಾಪ ಜಿಲ್ಲಾಧ್ಯಕ್ಷ ಸಿದ್ದಪ್ಪ ಹೊಟ್ಟಿ, ಡಾ.ಭಗವಂತ ಅನವಾರ, ರಾಚಯ್ಯ ಸ್ವಾಮಿ ಚನ್ನೂರ, ವೀರಣ್ಣ ರ್‍ಯಾಖಾ, ನೀಲಕಂಠರಾಯ ಯಲ್ಹೇರಿ, ರವೀಂದ್ರ ಜಾಕಾ, ಡಾ.ಹಣಮಂತರಡ್ಡಿ ಕೊಡ್ಲಾ ಇದ್ದರು. ಡಾ.ಸಿದ್ದರಾಜ ಪಾಟೀಲ್ ಸ್ವಾಗತಿಸಿ, ಪ್ರಾಸ್ತಾವಿಕ ಮಾತನಾಡಿದರು. ರಮೇಶ ದೊಡ್ಮನಿ ನಿರೂಪಿಸಿದರು.

* * *

ವೀರಶೈವ ಸರ್ಕಾರಿ ಕ್ಷೇಮಾಭಿವೃದ್ಧಿ ಸಂಘ ಮತ್ತು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಆಶ್ರಯದಲ್ಲಿ ನಗರದ ವೀರಶೈವ ಕಲ್ಯಾಣ ಮಂಟಪದಲ್ಲಿ ಸಿದ್ಧಗಂಗಾ ಮಠದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ೧೧೦ ನೇ ಜನ್ಮ ದಿನೋತ್ಸವ ಆಚರಿಸಲಾಯಿತು.

ಸರ್ಕಾರಿ ಪದವಿ ಕಾಲೇಜಿನ ಪ್ರಾಚಾರ್ಯ ಡಾ. ಸುಭಾಷ್ಚಂದ್ರ ಕೌಲಗಿ, ಊಟ, ವಸತಿಸಹಿತ ಉಚಿತ ಶಿಕ್ಷಣದ ಮೂಲಕ ಲಕ್ಷಾಂತರ ಬಡ ವಿದ್ಯಾರ್ಥಿಗಳ ಬಾಳು ಬೆಳಗುತ್ತಿರುವ ತುಮಕೂರಿನ ಸಿದ್ಧಗಂಗಾ ಮಠದ ಶತಾಯುಷಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಅವರಿಗೆ ಕೇಂದ್ರ ಸರ್ಕಾರ ಭಾರತ ರತ್ನ ಪ್ರಶಸ್ತಿ ನೀಡಿ ಗೌರವಿಸಬೇಕು ಎಂದು ಆಗ್ರಹಿಸಿದರು.

ಲಿಂಗಪೂಜೆ ಜತೆಗೆ ಜಂಗಮ ಸೇವೆ ಮಾಡುತ್ತ ಇಡೀ ಜಗತ್ತೇ ತನ್ನ ಕಡೆಗೆ ತಿರುಗಿ ನೋಡುವಂತೆ ಮಾಡಿದವರು ಶಿವಕುಮಾರ ಸ್ವಾಮೀಜಿ. ಅವರ ಜನ್ಮ ದಿನವನ್ನು ದಾಸೋಹ ದಿನವನ್ನಾಗಿ ಆಚರಿಸಬೇಕು ಎಂದು ಹೇಳಿದರು.

ಸರ್ಕಾರಿ ನೌಕರರ ಸಂಘದ ಜಿಲ್ಲಾಧ್ಯಕ್ಷ ಶಶಿಕಾಂತ ಕಶೆಟ್ಟಿ ಮಾತನಾಡಿ, ಯಾವುದೇ ಜಾತಿ, ಮತ ಭೇದವಿಲ್ಲದೆ ಬಡ ವಿದ್ಯಾರ್ಥಿಗಳಿಗೆ ಅನ್ನ, ವಸತಿ, ಅಕ್ಷರ ದಾಸೋಹ ಮಾಡುತ್ತಿರುವ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಮನುಕುಲದ ನಂದಾದೀಪ. ಅವರು ವಿಶ್ವರತ್ನ. ಅವರಿಗೆ ಭಾರತ ರತ್ನ ಪ್ರಶಸ್ತಿ ಕೊಟ್ಟರೆ ಆ ಪ್ರಶಸ್ತಿಗೇ ಗೌರವ ಬರಲಿದೆ ಎಂದು ಅಭಿಪ್ರಾಯಪಟ್ಟರು.

ಕಾರ್ಯಕ್ರಮದಲ್ಲಿ ಹಿರಿಯ ಪತ್ರಕರ್ತ ಅಯ್ಯಣ್ಣ ಹುಂಡೇಕಾರ, ಬಿ.ವಿ. ರೆಡ್ಡಿ, ಕಸಾಪ ಜಿಲ್ಲಾಧ್ಯಕ್ಷ ಸಿದ್ದಪ್ಪ ಹೊಟ್ಟಿ, ಬಸವಂತರಾಯಗೌಡ ಮಾಲಿ ಪಾಟೀಲ್, ಸೂಗಪ್ಪ ಪಾಟೀಲ್, ಶಂಕರಗೌಡ, ಸಾಹೇಬಗೌಡ ಬಿರಾದಾರ, ಪ್ರಭು ಬಾಗೇವಾಡಿ, ಮಲ್ಲಣ್ಣಗೌಡ, ರಾಜಶೇಖರ ಯಕ್ಕೆಳ್ಳಿ, ರಾಜಶೇಖರ ಕೊಳ್ಳಿ ಭಾಗವಹಿಸಿದ್ದರು.

ಸಂಗನಬಸವ ಕೊಡೇಕಲ್ ಪ್ರಾರ್ಥಿಸಿದರು. ಗೋಪಾಲರೆಡ್ಡಿ ಸ್ವಾಗತಿಸಿದರು. ಬಸವರಾಜ ಕೆರೋಟಗಿ ನಿರೂಪಿಸಿದರು. ನಾಗರಾಜ ಶೀಲವಂತ ವಂದಿಸಿದರು.

## ಶಹಾಬಾದ್

ಶತಾಯುಷಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ೧೧೦ನೇ ಜನ್ಮದಿನೋತ್ಸವ ನಿಮಿತ್ತ ಯುವಕರು ಸಮಾಜ ಮುಖಿ ಕಾರ್ಯಕ್ರಮಗಳನ್ನು ಮಾಡಿದಾಗ ಮಾತ್ರ ಶ್ರೀಗಳ ಜನ್ಮ ದಿನೋತ್ಸವಕ್ಕೆ ಅರ್ಥ ಬರುತ್ತದೆ ಎಂದು ರಾವೂರನ ಸಿದ್ದಲಿಂಗೇಶ್ವರ ಮಠದ ಪೀಠಾಧಿಪತಿ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಹೇಳಿದರು.

ರಾವೂರ ಗ್ರಾಮದ ಸಿದ್ಧಲಿಂಗೇಶ್ವರ ಸಂಸ್ಥಾನ ಮಠದ ಆವರಣದಲ್ಲಿ ಕರ್ನಾಟಕ ವಚನ ಸಾಹಿತ್ಯ ಅಕಾಡೆಮಿ ಚಿತ್ತಾಪುರ, ರಾವೂರ ಪ್ರಾಥಮಿಕ ಆರೋಗ್ಯ ಕೇಂದ್ರ, ಬರೂಕಾ ಆಸ್ಪತ್ರೆ ಕಲಬುರಗಿ ಆಶ್ರಯದಲ್ಲಿ ತುಮಕೂರು ಸಿದ್ಧಗಂಗಾ



ರಾವೂರಿನ ಸಿದ್ಧಲಿಂಗೇಶ್ವರ ಮಠದ ಪೀಠಾಧಿಪತಿ ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಕಾರ್ಯಕ್ರಮ ಉದ್ಘಾಟನೆ

ಮಠದ ಶತಾಯುಷಿ ಡಾ. ಶ್ರೀ ಶ್ರೀ ಶಿವುಕುಮಾರ ಮಹಾಸ್ವಾಮಿಗಳ ೧೧೧ನೇ ಜನ್ಮದಿನೋತ್ಸವ ನಿಮಿತ್ತ ಆಯೋಜಿಸಿದ್ದ ಉಚಿತ ನೇತ್ರ ತಪಾಸಣೆ ಶಿಬಿರ, ಅನ್ನ ದಾಸೋಹ, ವಿವಿಧ ಕ್ಷೇತ್ರದಲ್ಲಿ ಸಾಧನೆಗೈದವರಿಗೆ ಸಿದ್ದ ಸಾಧಕ ಪ್ರಶಸ್ತಿ ವಿತರಣಾ ಸಮಾರಂಭದಲ್ಲಿ ಮಾತನಾಡಿದ ಅವರು, ನೇತ್ರ ಪರೀಕ್ಷೆ, ಆರೋಗ್ಯ ತಪಾಸಣೆಯಂತಹ ಕಾರ್ಯಕ್ರಮದೊಂದಿಗೆ ಗ್ರಾಮೀಣ ಪ್ರದೇಶದಲ್ಲಿ ಅನೈರ್ಮಲ್ಯ ತಾಣಗಳ ಸ್ವಚ್ಚತಾ ಕಾರ್ಯ, ಚರಂಡಿ, ಸಾರ್ವಜನಿಕ ಶೌಚಗೃಹಗಳ ಸ್ವಚ್ಚತೆ ಕುರಿತು ನಿಗಾ ವಹಿಸುವ ಕಾರ್ಯ ಯುವ ಸಂಘಟನೆಗಳಿಂದ ಆಗಬೇಕಿದೆ ಎಂದು ಸಲಹೆ ನೀಡಿದರು.

ಗುರುಮಿಠಕಲ್‌ನ ಖಾಸಾ ಮಠದ ಶ್ರೀ ಶಾಂತವೀರ ಗುರು ಮುರುಘರಾಜೇಂದ್ರ ಸ್ವಾಮಿಗಳು ಮಾತನಾಡಿದರು. ರಂಗಭೂಮಿಯ ಅಶೋಕ ತೋಟ್ನಳ್ಳಿ, ಶಿಲ್ಪಕಲೆಯಲ್ಲಿ ನಟರಾಜ ಶಿಲ್ಪಿ, ಸಾಹಿತ್ಯದಲ್ಲಿ ಕೆ.ಎಂ.ವಿಶ್ವನಾಥ ಮರತೂರ, ಸಮಾಜ ಸೇವೆಯಲ್ಲಿ ಮಹ್ಮದ್ ಇಬ್ರಾಹಿಂ, ಮಾಧ್ಯಮದಲ್ಲಿ ವಿಜಯಕುಮಾರ ನೀಲಗಾರ ನಾಲವಾರ ಅವರಿಗೆ ಸಿದ್ದ ಸಾಧಕ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಚನ್ನಣ್ಣ ಬಾಳಿ, ಕರ್ನಾಟಕ ವಚನ ಸಾಹಿತ್ಯ ಅಕಾಡಮಿ ಜಿಲ್ಲಾ ಅಧ್ಯಕ್ಷ ವಿಜಯಕುಮಾರ ಪಾಟೀಲ ತೆಗಲತಿಪ್ಪಿ, ರಾವೂರ ವೈದ್ಯಾಧಿಕಾರಿ ಡಾ. ಶಿವಶರಣಪ್ಪ ಕಾಶೆಟ್ಟಿ, ಶ್ರೀನಿವಾಸ ಸಗರ, ಶಿವಲಿಂಗಪ್ಪ ವಾಡೇದ್, ಜಿಪಂ ಮಾಜಿ ಸದಸ್ಯ ಡಾ. ಗುಂಡಣ್ಣ ಬಾಳಿ, ಶರಣು ಜ್ಯೋತಿ ಮೊದಲಾದವರು ಉಪಸ್ಥಿತರಿದ್ದರು.

ಅಕಾಡೆಮಿ ತಾಲೂಕಾಧ್ಯಕ್ಷ ಸಿದ್ದಲಿಂಗ ಬಾಳಿ ಪ್ರಾಸ್ತಾವಿಕ ಮಾತನಾಡಿದರು. ಶಿಕ್ಷಕಿ ಸುಗುಣಾ ಕೋಳಕೂರ್ ನಿರೂಪಿಸಿದರು. ಭುವನೇಶ್ವರಿ ಮಾರ್ಕಂಡೆಯ ಸಿದ್ದ ಸಾಧಕರನ್ನು ಪರಿಚಯಿಸಿಯಿದರು, ಶರಣು ಜ್ಯೋತಿ ವಂದಿಸಿದರು.

## ಹುಮನಾಬಾದ್

ದೇಶದಲ್ಲಿ ಹುಟ್ಟಿದ ಪ್ರತಿಯೊಂದು ಮಗುವಿಗೆ ಉನ್ನತ ಶಿಕ್ಷಣ ಸಂಪೂರ್ಣ ಉಚಿತವಾಗಿ ಸಿಗಬೇಕು ಎಂಬುವುದು ಸ್ವಾತಂತ್ರ್ಯ ಹೋರಾಟಗಾರರ ಕನಸಾಗಿದೆ ಎಂದು ಸಾಮಾಜಿಕ ಕಾರ್ಯಕರ್ತ ಗುರುನಾಥ ವಡ್ಡೆ ಹೇಳಿದರು.

ಪಟ್ಟಣದ ಜ್ಞಾನ ಕಸ್ತೂರಿ ಶಿಕ್ಷಣ ಸಂಸ್ಥೆಯ ಸಿದ್ಧಗಂಗಾ ಪದವಿ ಕಾಲೇಜಿನಲ್ಲಿ ಅಖಿಲ ಭಾರತ ವೀರಶೈವ ಮಹಾಸಭಾ ವತಿಯಿಂದ ನಡೆದ ತುಮಕೂರಿನ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ೧೧೧ನೇ ಜನ್ಮದಿನ ಕಾರ್ಯಕ್ರಮ ನಿಮಿತ್ತ

ಸಾಮಾಜಿಕ ಕಾರ್ಯಕರ್ತ ಶ್ರೀ ಗುರುವಾಡಿ ವಡ್ಡೆಯವರಿಗೆ ಸಿದ್ಧಗಂಗಾಶ್ರೀ ಪ್ರಶಸ್ತಿ ಪ್ರದಾನ.

ಸಿದ್ಧಗಂಗಾ ಶ್ರೀ ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಅವರು, ನಿಜವಾದ ಪ್ರಜಾಪ್ರಭುತ್ವ ಇಂದಿಗೂ ಸರ್ಕಾರ ಜಾರಿಗೆ ತಂದಿಲ್ಲ. ನಮಗೆ ಸ್ವಾತಂತ್ರ್ಯ ಸಿಕ್ಕಿದ್ದು ಹಿರಿಯ ಹೋರಾಟ ಹಾಗೂ ಬಲಿದಾನದಿಂದ, ಇಂದು ನಾವು ನಮ್ಮ ಹಕ್ಕುಗಳಿಗಾಗಿ ಹೋರಾಟ ಮಾಡಬೇಕಾಗಿದೆ ಎಂದರು.

ಸಾನ್ನಿಧ್ಯ ವಹಿಸಿದ್ದ ಬೇಮಳಖೇಡಾದ ಡಾ. ರಾಜಶೇಖರ ಸ್ವಾಮಿ ಗೋರ್ಟಾ ಮಾತನಾಡಿ, ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ರಾಜ್ಯದ ಪಾಲಿಗೆ ನಡೆದಾಡುವ ದೇವರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ನ್ಯಾಯದಿಂದ ವಂಚಿತರಾದವರಿಗೆ ನ್ಯಾಯ ದೊರಕಿಸಿ ಕೊಡುವುದು ಸರ್ಕಾರದ ಕರ್ತವ್ಯವಾಗಿದೆ. ಆದರೆ ಸರ್ಕಾರ ತನ್ನ ಕರ್ತವ್ಯ ನಿರ್ವಹಿಸದಿದ್ದರೆ, ಗುರುನಾಥ ವಡ್ಡೆಯಂತಹವರು ಹುಟ್ಟುತ್ತಾರೆ. ಇವರ ಜೀವನ ನಿಜವಾಗಿಯು ಸಂಘರ್ಷವಾಗಿದೆ ಜಿಲ್ಲೆಯ ಅನೇಕ ಗ್ರಾಮಗಳಿಗೆ ಕುಡಿಯುವ ನೀರು ರಸ್ತೆ ಹಾಗೂ ವೈದ್ಯಾಧಿಕಾರಿಗಳು ಹಾಗೂ ಅನೇಕ ಸೌಲಭ್ಯ ಕೊಡಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಇಂತಹವರಿಗೆ ಇಂದು ಸಿದ್ಧಗಂಗಾ ಶ್ರೀ ಪ್ರಶಸ್ತಿ ನೀಡುವುದು ಸಂತಸ ಸಂಗತಿ ಎಂದರು.

ಕಲ್ಯಾಣ ಕರ್ನಾಟಕ ಪ್ರತಿಷ್ಠಾನದ ತಾಲೂಕು ಅಧ್ಯಕ್ಷ ಪಂಡಿತ ಬಾಳೂರೆ, ಮಹಾಸಭಾದ ತಾಲೂಕು ಅಧ್ಯಕ್ಷ ಜಗನ್ನಾಥ ಹಲ್ಮಡಗಿ ಮಾತನಾಡಿದರು. ಪ್ರಮುಖರಾದ ಗುರುಲಿಂಗ ಭಾವಿ, ರಮೇಶ ಚಿಮಕೊಡೆ, ದೀಲಿಪ ಬಂಬಳಗಿ, ಹರಿಶ ಡಾಂಘೆ, ವೀರಯ್ಯಾ ಸ್ವಾಮಿ, ದೇವರಾಜ ಚೌಧರಿ, ವಿಕಾಸ, ಶ್ವೇತಾ, ಉಪಸ್ಥಿತರಿದ್ದರು ಪ್ರಾಚಾರ್ಯರಾದ ಸಂತೋಷ ವ್ಹಿ ಪರೀಟ ಸ್ವಾಗತಿಸಿದರು. ಗಣೇಶ ಶೀಲವಂತ ನಿರೂಪಿಸಿದರು, ಶಿವಕುಮಾರ ಬಿರಾದರ ವಂದಿಸಿದರು.

### ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

**ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.**

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 1614. | ಶ್ರೀ ಎಸ್. ನಂಜುಂಡಯ್ಯ<br>ಗುಬ್ಬಿ ಗೇಟ್ | 1,100.00 |
| 1615. | ಶ್ರೀ ಪಿ. ರಾಜಣ್ಣ<br>ಬೆಂಗಳೂರು | 2,000.00 |
| 1616. | ಶ್ರೀ ಎಸ್. ಶಾಂತಯ್ಯ<br>ಕಂಬಾಳು | 1,000.00 |
| 1617. | ಶ್ರೀಮತಿ ನೀಲಾಂಬಿಕೆ ರಾಜೇಶ್<br>ಬೆಂಗಳೂರು | 5,001.00 |
| 1618. | ಶ್ರೀಮತಿ ಜಯಮ್ಮ ಕೋಂ. ಎಂ. ದಾನಪ್ಪ<br>ಚಿಕ್ಕನಾಯಕನಹಳ್ಳಿ | 1,005.00 |
| 1619. | ಶ್ರೀ ಡಿ.ಬಿ. ನಂಜಪ್ಪ<br>ಬೆಂಗಳೂರು | 1,000.00 |
| 1620. | ಶ್ರೀ ಜಿ. ಚಂದ್ರಶೇಖರಯ್ಯ<br>ಬೆಂಗಳೂರು | 2,500.00 |
| 1621. | ಶ್ರೀ ಹೊನ್ನಪ್ಪ<br>ಬೆಂಗಳೂರು | 1,001.00 |
| 1622. | ಶ್ರೀ ಎಂ. ಜಯಣ್ಣ<br>ಬೆಂಗಳೂರು | 1,001.00 |
| 1623. | ಶ್ರೀ ಎನ್.ಬಿ. ಶಿವಶಂಕರಾಚಾರ್<br>ಬೆಂಗಳೂರು | 1,000.00 |
| 1624. | ಶ್ರೀ ಬಿ. ಯತಿರಾಜ್<br>ಹೊಸೂರು | 5,001.00 |
| 1625. | ಶ್ರೀ ಎನ್.ಬಿ. ಬಸವಲಿಂಗಯ್ಯ<br>ಬೆಂಗಳೂರು | 5,001.00 |
| 1626. | ಶ್ರೀ ಟಿ.ಕೆ. ಶಿವಲಿಂಗಪ್ಪ<br>ದಾವಣಗೆರೆ | 1,000.00 |
| 1627. | ಶ್ರೀ ಎಂ. ಮಹೇಶ್<br>ಬಿ.ಕೆ. ಸಂತೇಮಾರಹಳ್ಳಿ | 1,000.00 |
| 1628. | ಶ್ರೀ ಶಿವಣ್ಣ<br>ಬೇಗೂರು | 1,001.00 |
| 1629. | ಶ್ರೀ ಎಂ. ಭುಜಂಗಪೂಜಾರಿ<br>ಪಾವಗಡ | 1,000.00 |
| 1630. | ಶ್ರೀ ಕೆ. ಸಿದ್ದಲಿಂಗಪ್ಪ<br>ಬಿಳಿಕಲ್ಲು | 1,000.00 |
| 1631. | ಶ್ರೀ ಸಿದ್ಧಪ್ಪ ಮತ್ತು ಕುಟುಂಬದವರು<br>ಹಾಲೇನಹಳ್ಳಿ | 1,005.00 |
| 1632. | ಶ್ರೀಮತಿ ಯಶೋಧ<br>ಬೆಂಗಳೂರು | 1,000.00 |
| 1633. | ಶ್ರೀ ಶಿವಮೂರ್ತಯ್ಯಸ್ವಾಮಿ-ಎಫ್<br>ಕಟಗಿಹಳ್ಳಿಮಠ, ಗುತ್ತಲ | 1,000.00 |
| 1634. | ಶ್ರೀ ಬಿ.ಎ. ಉದಯಶಂಕರ್<br>ಬೇಲೂರು | 25,000.00 |
| 1635. | ಶ್ರೀ ಆರ್. ಗೋವಿಂದರಾಜು<br>ಬೆಂಗಳೂರು | 1,000.00 |
| 1636. | ಶ್ರೀ ಶಾಂತವೀರಪ್ಪ, ನಿ. ಶಿಕ್ಷಕರು<br>ಬೆಂಗಳೂರು | 10,000.00 |
| 1637. | ಶ್ರೀ ಜಿ. ಗುರುಬಸಪ್ಪ<br>ಬೆಂಗಳೂರು | 50,001.00 |
| 1638. | ಶ್ರೀ ಕೆ. ಚಂದ್ರಶೇಖರಯ್ಯ<br>ಬಿಳಿಕಲ್ಲಹಳ್ಳಿ | 1,001.00 |
| 1639. | ಶ್ರೀ ಬಸವರಾಜಪ್ಪ<br>ತುಮಕೂರು | 1,000.00 |
| 1640. | ಶ್ರೀ ಕೆ. ವಿರೂಪಾಕ್ಷಯ್ಯ<br>ಬಸವೇಶ್ವರ ಬಡಾವಣೆ | 2,000.00 |
| 1641. | ಶ್ರೀ ಸಿದ್ಧರೇವಯ್ಯ<br>ಬೆಂಗಳೂರು | 1,000.00 |
| 1642. | ಶ್ರೀ ಕೆ.ಎಂ. ಕೊಟ್ರಪ್ಪ<br>ಕೊಟ್ಟೂರು | 1,000.00 |
| 1643. | ಶ್ರೀ ಕೆ.ಎಸ್. ಲಿಂಗದೇವರು<br>ಬೆಂಗಳೂರು | 1,000.00 |
| 1644. | ಶ್ರೀ ಗೋವಿಂದಯ್ಯ<br>ಬೆಂಗಳೂರು | 1,001.00 |
| 1645. | ಶ್ರೀ ಹೆಚ್.ಎಂ. ಬಸಪ್ಪ<br>ಬೆಂಗಳೂರು | 2,001.00 |





| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 1646. | ಶ್ರೀ ಶಂಕರ್ ವನಜ ಮತ್ತು<br>ವಿಶಾಲಾಕ್ಷಿ ಚನ್ನಬಸಪ್ಪ<br>ಯು.ಎಸ್.ಎ. | 6,800.00 |
| 1647. | ಶ್ರೀ ಡಿ.ಎಲ್. ಚಂದ್ರಶೇಖರ್<br>ಬೆಂಗಳೂರು | 10,001.00 |
| 1648. | ಶ್ರೀ ಎಂ. ದಯಾನಂದ<br>ಬೆಂಗಳೂರು | 1,001.00 |
| 1649. | ಶ್ರೀ ಸಿ.ಬಿ. ಯೋಗೇಶ್<br>ಮಾಗಡಿ | 1,000.00 |
| 1650. | ಶ್ರೀ ಎಂ. ಮಹೇಶ್<br>ಬೆಂಗಳೂರು | 2,100.00 |
| 1651. | ಶ್ರೀ ವಿ. ಮೂರ್ತಿ<br>ಬೆಂಗಳೂರು | 1,008.00 |
| 1652. | ಶ್ರೀ ಜಗದೀಶ್<br>ಮೈಸೂರು | 3,500.00 |
| 1653. | ಶ್ರೀ ಮಹದೇವಯ್ಯ<br>ಬೆಂಗಳೂರು | 1,001.00 |
| 1654. | ಶ್ರೀ ಎ.ಪಿ. ರುದ್ರಪ್ಪ<br>ಮೈಸೂರು | 500.00 |
| 1655. | ಶ್ರೀ ಬಿ.ಎಂ. ಗುರುಮೂರ್ತಿಸ್ವಾಮಿ<br>ಶ್ರೀಧರ ಗದ್ದೆ | 1,001.00 |
| 1656. | ಶ್ರೀ ಬಿ.ಎಸ್. ಪಾಟೀಲ್<br>ಬಳ್ಳಾರಿ | 1,001.00 |
| 1657. | ಶ್ರೀ ಕರಿಸಿದ್ಧಯ್ಯ<br>ತಿಪಟೂರು | 1,000.00 |
| 1658. | ಶ್ರೀ ಎಲ್. ಲಿಂಗಣ್ಣ<br>ತುಮಕೂರು | 10,000.00 |
| 1659. | ಶ್ರೀ ಜಿ.ಆರ್. ಹಾಲಪ್ಪ<br>ಭದ್ರಾವತಿ | 10,000.00 |
| 1660. | ಶ್ರೀ ಜಿ.ಎಂ. ರೇಣುಕಾರಾಧ್ಯ<br>ಬೆಂಗಳೂರು | 2,000.00 |
| 1661. | ಶ್ರೀ ರುದ್ರಯ್ಯ ನಿವೃತ್ತ ಕಾನ್ಸ್‌ಟೆಬಲ್<br>ಕ್ಯಾತ್ಸಂದ್ರ | 500.00 |
| 1662. | ಶ್ರೀ ಎನ್.ಸಿ. ಬಸವರಾಜು<br>ಕೆಂಬ ಲಿಂಗನಹಳ್ಳಿ | 2,000.00 |
| 1663. | ಶ್ರೀ ಎನ್. ಸಿದ್ಧರಾಮಯ್ಯ<br>ಗೌರಿಬಿದನೂರು | 1,000.00 |
| 1664. | ಶ್ರೀ ಕೆ. ಬಸವರಾಜಪ್ಪ<br>ಸುರಹೊನ್ನೆ | 1,105.00 |
| 1665. | ಶ್ರೀ ಜಿ.ಎ. ಪ್ರಭು<br>ಗುಡ್ಡೇನಹಳ್ಳಿ | 1,000.00 |
| 1666. | ಶ್ರೀ ಡಿ.ಬಿ. ಚಂದ್ರಶೇಖರಪ್ಪ<br>ಚಿಕ್ಕಪಟ್ಟಣಗೆರೆ | 2,005.00 |
| 1667. | ಶ್ರೀ ಬಿ.ಸಿ. ಬಸವರಾಜು<br>ಕೆ. ಬಿದರೆ | 1,000.00 |
| 1668. | ಶ್ರೀ ಆರ್. ನಾಗರಾಜು<br>ಮಧುಗಿರಿ ಟೌನ್ | 1,000.00 |
| 1669. | ಶ್ರೀ ಶಿವಾನಂದ ಮರಿಯಲ್ಲಪ್ಪ<br>ಗೌಡರು, ಗುನ್ನಾಗರ | 2,000.00 |
| 1670. | ಶ್ರೀ ರಂಗಸ್ವಾಮಿ ಜಿ.<br>ಕುದುರೇಮುಖ | 2,000.00 |
| 1671. | ಶ್ರೀ ಕೆ.ಪಿ. ಉಷಾರಾಣಿ<br>ಕೂಗಿಕೊಡೆ | 1,000.00 |
| 1672. | ಶ್ರೀ ಕೆ.ಟಿ. ಹನುಮಂತಯ್ಯ<br>ಅಂದ್ರಹಳ್ಳಿ | 1,001.00 |
| 1673. | ಶ್ರೀ ಜಿ. ಚಂದ್ರಶೇಖರಯ್ಯ<br>ಬೆಂಗಳೂರು | 5,501.00 |
| 1674. | ಶ್ರೀ ವೀರಭದ್ರಯ್ಯ<br>ಬನಶಂಕರಿ, ಬೆಂಗಳೂರು | 10,000.00 |
| 1675. | ಶ್ರೀ ನಾಗರಾಜು<br>ಸಹಕಾರ ನಗರ, ಬೆಂಗಳೂರು | 1,000.00 |
| 1676. | ಪ್ರೊ. ಬಿ. ಪ್ರಭುರಾಜ್<br>ಆರ್.ಟಿ. ನಗರ, ಮೈಸೂರು | 10,000.00 |
| 1677. | ಶ್ರೀ ಎ. ಗುರಪ್ಪ<br>ಆರ್.ಟಿ. ನಗರ, ಮೈಸೂರು | 1,000.00 |
| 1678. | ಶ್ರೀ ಕೆ.ಜಿ. ಮಂಜುನಾಥ್<br>ತುಮಕೂರು | 1,000.00 |
| 1679. | ಶ್ರೀ ಜಿ.ಸಿ. ಬುಟ್ಟಮಲ್ಲಪ್ಪ<br>ಜೀರಗಿಹಳ್ಳಿ | 1,000.00 |
| 1680. | ಶ್ರೀ ರೇವಣ್ಣ<br>ಚೋಳನಾಯಕನಹಳ್ಳಿ | 1,101.00 |
| 1681. | ಶ್ರೀ ಎಸ್.ವಿ. ಸಾವಂತ್<br>ಶಿರಸಿ | 1,000.00 |
| 1682. | ಶ್ರೀ ಕೆ.ಜಿ. ಚಂದ್ರಶೇಖರಪ್ಪ<br>ಕಿಲಗೆರೆ | 500.00 |
| 1683. | ಶ್ರೀ ಎಸ್. ಪರಮೇಶ್ವರಪ್ಪ<br>ಹೂವಿನಹಡಗಲಿ | 10,000.00 |

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 1684. | ಶ್ರೀ ಹೆಚ್. ಕರಿಬಸಪ್ಪ<br>ಚಟ್ಟನಹಳ್ಳಿ | 1,000.00 |
| 1685. | ಶ್ರೀ ಡಿ. ಬಸವರಾಜಯ್ಯ<br>ಬೆಂಗಳೂರು | 10,000.00 |
| 1686. | ಶ್ರೀ ಅಡವೀಶಯ್ಯ<br>ಓಜೇನಹಳ್ಳಿ | 1,000.00 |
| 1687. | ಶ್ರೀ ಹೆಚ್.ಪಿ. ಬಸವಲಿಂಗಪ್ಪ<br>ಹಾರನಹಳ್ಳಿ | 5,000.00 |
| 1688. | ಶ್ರೀ ಹೊನ್ನವೀರಪ್ಪ<br>ಹಾರಿಕೊಗ್ಗಳಲ | 1,000.00 |
| 1689. | ಶ್ರೀ ರುದ್ರಪ್ಪ<br>ಗೆದ್ದಲಹಳ್ಳಿ | 1,000.00 |
| 1690. | ಶ್ರೀ ಗಂಗನರಸಿಂಹಯ್ಯ<br>ಸೊಂಡೇಕುಪ್ಪ | 1,001.00 |
| 1691. | ಶ್ರೀ ಚಂದ್ರಯ್ಯ<br>ಮಲ್ಲಸಂದ್ರ | 1,001.00 |
| 1692. | ಶ್ರೀ ಪಿ. ರಾಜಶೇಖರಪ್ಪ<br>ಟಿ. ಮಾಯಗೊಂಡನಹಳ್ಳಿ | 1,000.00 |
| 1693. | ಶ್ರೀ ಎಂ. ಮಲ್ಲಿಕಾರ್ಜುನ<br>ಬೆಂಗಳೂರು | 1,001.00 |
| 1694. | ಶ್ರೀ ಎಸ್.ವಿ. ಸದಾಶಿವ<br>ಶೆಟ್ಟರಕೊಪ್ಪಲು | 1,000.00 |
| 1695. | ಶ್ರೀ ಹನುಮೇಶ<br>ಯಲಹಂಕ, ಬೆಂಗಳೂರು | 1,211.00 |
| 1696. | ಶ್ರೀ ಪ್ರಕಾಶ್<br>ಕೆ.ಪಿ. ಅಗ್ರಹಾರ | 1,001.00 |
| 1697. | ಶ್ರೀ ಎಸ್.ಎಲ್. ಶಾಂತಯ್ಯ<br>ಸಂಗನಹಳ್ಳಿ | 5,005.00 |
| 1698. | ಶ್ರೀ ಎಂ.ಎ. ಟೀಕೇಶ್ವರಯ್ಯ<br>ಟಿ. ಮಾಯಗೊಂಡನಹಳ್ಳಿ | 1,001.00 |
| 1699. | ಶ್ರೀ ಮಲ್ಲಿಕಾರ್ಜುನ ಒಡೆಯರ್<br>ಬೆಟ್ಟಹಲಸೂರು | 1,050.00 |
| 1700. | ಶ್ರೀ ಎಸ್.ಸಿ. ಬೈಲಯ್ಯ<br>ಬೆಂಗಳೂರು | 1,010.00 |
| 1701. | ಶ್ರೀ ಜಿ.ಎನ್. ರಾಮರಾಧ್ಯ<br>ಬೆಂಗಳೂರು | 1,000.00 |
| 1702. | ಶ್ರೀ ಜಿ.ಎನ್. ಶಿವರಾಮರಾಧ್ಯ<br>ಬೆಂಗಳೂರು | 1,000.00 |
| 1703. | ಶ್ರೀ ಜಿ. ಸೋಮಣ್ಣ<br>ದೊಡ್ಡಬೊಮ್ಮಸಂದ್ರ | 1,0001.00 |
| 1704. | ಶ್ರೀ ನಾಗೇಶ್ ಹೆಚ್.ಸಿ.<br>ಹನುಮಣ್ಣನಪಾಳ್ಯ | 1,000.00 |
| 1705. | ಶ್ರೀ ಆರ್.ಎಸ್. ರಾಜಣ್ಣ<br>ಊರುಕೆರೆ | 1,000.00 |
| 1706. | ಶ್ರೀ ಎ.ಆರ್. ನವೀನ್‌ಕುಮಾರ್<br>ಅಂಗಟ್ಟ | 1,010.00 |
| 1707. | ಶ್ರೀ ಎಂ.ಜಿ. ರಾಜಶೇಖರಪ್ಪ<br>ಮುಗುದುತ್ತಿ | 2,001.00 |
| 1708. | ಶ್ರೀ ಭುಜಂಗಪಾಣಿ<br>ಪಾವಗಡ | 1,000.00 |
| 1709. | ಶ್ರೀ ಕೆ. ಸಿದ್ಧಗಂಗಪ್ಪ<br>ಬ್ಯಾಡರಹಳ್ಳಿ | 1,000.00 |
| 1710. | ಶ್ರೀ ಕೆ. ಮುನೇಗೌಡ<br>ದೊಡ್ಡಬಳ್ಳಾಪುರ | 5,000.00 |
| 1711. | ಶ್ರೀ ಹೆಚ್.ಕೆ. ಉದ್ದಂಡಪ್ಪ<br>ಬೆಂಗಳೂರು | 2,001.00 |
| 1712. | ಶ್ರೀ ಪಿ. ಗುರುಪಾದಸ್ವಾಮಿ<br>ವಂಗಲವಾಡಿ | 1,000.00 |
| 1713. | ಶ್ರೀ ಎನ್. ಬಸಪ್ಪ<br>ಕರೂರು | 1,000.00 |
| 1714. | ಶ್ರೀ ಆರ್.ಎನ್. ಶಿವಲಿಂಗಪ್ಪ<br>ತಿಪಟೂರು | 1,000.00 |
| 1715. | ಶ್ರೀ ಮುದ್ದರಾಜ ರೇವಣ್ಣ<br>ದೇವದುರ್ಗ | 2,000.00 |
| 1716. | ಶ್ರೀ ಜೆ.ಸಿ. ಕೃಷ್ಣಮೂರ್ತಿ<br>ಮೈಸೂರು | 1,005.00 |
| 1717. | ಶ್ರೀ ಜಿ.ಆರ್. ನಟರಾಜ್<br>ಬೆಂಗಳೂರು | 4,000.00 |
| 1718. | ಪ್ರೊ. ಕೆ.ಆರ್. ಪ್ರಭು<br>ಬೆಂಗಳೂರು | 2,000.00 |
| 1719. | ಶ್ರೀ ಹೆಚ್.ಬಿ. ವೀರಭದ್ರಯ್ಯ<br>ಹೆಬ್ಬಳ | 300.00 |
| 1720. | ಶ್ರೀ ಎಸ್. ರೇಣುಕಯ್ಯ<br>ಬೆಂಗಳೂರು | 2,000.00 |
| 1721. | ಶ್ರೀ ಎಸ್. ಶಂಕರಪ್ಪ<br>ಹಲ್ಲದಹಳ್ಳಿ | 1,000.00 |

*(ಮುಂದುವರೆಯುತ್ತದೆ)*



ಹೀರೆಹಳ್ಳಿ ಸಮೀಪದಲ್ಲಿರುವ ಪ್ರೂಡೇನ್ಸ ಶಾಲೆಯ ನೂತನ ಕಟ್ಟಡದ ಲೋಕಾರ್ಪಣೆಯನ್ನು ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಜ್ಯೋತಿ ಬೆಳಗಿಸಿ ನೆರವೇರಿಸಿದರು. ಈ ಸಂದರ್ಭದಲ್ಲಿ ಶ್ರೀ ಪಿ. ರುದ್ರೇಶ್‌ಕುಮಾರ್, ಶ್ರೀ ಜಿ.ಎಸ್. ರೇಣುಕಪ್ಪ, ಶ್ರೀಮತಿ ರೂಪರುದ್ರೇಶ್ ಉಪಸ್ಥಿತರಿದ್ದರು.



ಬಿಡಿಎ ಯಲ್ಲಿ ಕಾರ್ಯನಿರ್ವಹಿಸಿ ನಿವೃತ್ತರಾಗಿರುವ ಶ್ರೀ ಕೆ. ಬಸವಯ್ಯನವರು ನೂತನವಾಗಿ ನಿರ್ಮಿಸಿರುವ ಮನೆಯ ಗೃಹಪ್ರವೇಶದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ಕಂಚುಗಲ್ ಬಂಡೇಮಠದ ಶ್ರೀಗಳು, ಸೇರಿದಂತೆ ಹರಗುರು ಚರಮೂರ್ತಿಗಳು ಭಾಗವಹಿಸಿ ಶ್ರೀ ಕೆ. ಬಸವಯ್ಯ ಕುಟುಂಬದವರನ್ನು ಆಶೀರ್ವದಿಸಿದರು.



ಮಾಗಡಿ ತಾಲ್ಲೂಕು ಸೋಲೂರು ಹೋಬಳಿ ಪಾಲನಹಳ್ಳಿಯಲ್ಲಿ ಜೀರ್ಣೋದ್ಧಾರ ಮಾಡಿದ ಪರ್ಣಾಪುರೇಶ್ವರಿ ದೇವಾಲಯವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು, ಗಣ್ಯರು ಭಾಗವಹಿಸಿದ್ದರು.



೨೦೧೭ ರಲ್ಲಿ ನಡೆದ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ರಾಜ್ಯಕ್ಕೆ ೨ನೇ ರ್‍ಯಾಂಕ್ ಪಡೆದ ಚಿ|| ಪಿ. ತೇಜಸ್ ಅವರನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಸನ್ಮಾನಿಸಿ ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಪೋಷಕರು ಹಾಗೂ ಶಿಕ್ಷಕ ವರ್ಗದವರು ಉಪಸ್ಥಿತರಿದ್ದರು.



ಶ್ರೀಮಠದಲ್ಲಿ ಏರ್ಪಡಿಸಿದ್ದ ಕೇಂದ್ರ ಸರ್ಕಾರದ ಯೋಜನೆಗಳ ಪ್ರಚಾರಾಂದೋಲನದ ಮೋದಿ ಫೆಸ್ಟ್ ಹೆಸರಿನ ೩ ದಿನಗಳ ಕಾರ್ಯಕ್ರಮಕ್ಕೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಚಾಲನೆ ನೀಡಿದರು.



ತುಮಕೂರು ಬಟಾವಡೆಯಲ್ಲಿರುವ ಶ್ರೀ ವೆಂಕಟೇಶ್ವರ ಸ್ವಾಮಿ ದೇವಸ್ಥಾನದ ಕಳಸ ಪ್ರತಿಷ್ಠಾಪನೆ ಕಾರ್ಯಕ್ರಮದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ದೇವಸ್ಥಾನದ ಆಡಳಿತ ಮಂಡಳಿಯವರು ಹಾಗೂ ಭಕ್ತರು ಉಪಸ್ಥಿತರಿದ್ದರು.